ಶಿಲಸೇವಾ ಗ್ರಂಥಮಾಲೆಯ ಎಂಟನೆಯ ಕುಸುಮ

# ಶಕುಂತಳೆ

ಗ್ರಂಥಕರ್ತ:

ಜೆ. ವಾಮನ ಭಟ್ಟ, ಬಿ. ಎ.,

ಅಧ್ಯಕ್ಷ, ಮಿತ್ರಮಂಡಳಿ, ಮಂಗಳೂರು.



1935

ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.

ಬೆಲೆ: ೦—೮—೦

# ವಿಜ್ಞಾಪನೆ

ಸಂಸ್ಕೃತದ ಜ್ಞಾನವಿಲ್ಲದವರಿಗೆ ಅಭಿಜ್ಞಾನ ಶಾಕುಂತಳದ ಕಥೆಯನ್ನಾದರೂ ತಿಳಿಯಪಡಿಸಬೇಕೆಂಬ ಉದ್ದೇಶದಿಂದ ಪುಸ್ತಕವಿದನ್ನು ಪ್ರಕಟಿಸುವ ಪ್ರಯತ್ನಕ್ಕೆ ಕೈ ಹಚ್ಚಿರುವೆನು.

ಗುರುಶಿಷ್ಯ ಸಂಬಂಧವನ್ನಿಟ್ಟು ಈ ಪುಸ್ತಕದಲ್ಲಿದ್ದ ಹಲವು ತಪ್ಪುಗಳನ್ನು ತಿದ್ದಿ ಮುನ್ನುಡಿಯೊಂದನ್ನೂ ಬರೆದು ಆಶೀರ್ವದಿಸಿದ ನಿವೃತ್ತ ಡಿಸ್ಟ್ರಿಕ್ಟ್ ಮತ್ತು ಸೆಶ್ಯನ್ಸ್ ಜಡ್ಜಿ, ಶ್ರೀ। ಎಮ್. ನರಸಿಂಗ ರಾವ್, ಬಿ. ಎ., ಎಮ್. ಎಲ್.ರವರಿಗೆ ನಾನು ಕೃತಜ್ಞನಿದ್ದೇನೆ.

ಈ ಪುಸ್ತಕವನ್ನು ಮಿತ್ರಮಂಡಳಿಯ ಅಖಿಲಸೇವಾ ಗ್ರಂಥಮಾಲೆಯ ಕುಸುಮವೊಂದಾಗಿ ಪೋಣಿಸಿದ ಮಂಡಳಿಯ ಕಾರ್ಯಕಾರೀ ಮಂಡಳಕ್ಕೂ ನಾನು ಆಭಾರಿಯಾಗಿದ್ದೇನೆ.

ಪುಸ್ತಕವಿದನ್ನು ಅಂದವಾಗಿಯೂ ಶ್ರೀಘ್ರವಾಗಿಯೂ ಮುದ್ರಿಸಿ ಕೊಟ್ಟ ಶ್ರೀ। ಯು. ಗಣೇಶ ಶೆಣೈಯವರಿಗೂ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥವನ್ನು ರಚಿಸುವುದರಲ್ಲಿ ಶ್ರೀ। ರಾಮವರ್ಮ ಮತ್ತು ಶ್ರೀ। ಕೆ. ಪಿಷಾರಕರ 'ಸಾರಾರ್ಥ ದೀಪಿಕಾ' ಎಂಬ ಟೀಕೆಯು ನನಗೆ ಬಹಳ ಉಪಯುಕ್ತವಾಗಿದೆ. ಆದುದರಿಂದಲೇ ಅದರಲ್ಲಿ ಇರುವಂತೆಯೆ "ದುಷ್ಷಂತ" ಎಂತಲೇ ಬರೆದಿರುತ್ತೇನೆ. ರಾಘವ ಭಟ್ಟನ **'ಅರ್ಥದ್ಯೋತನಿಕಾ'** ಟೀಕೆಯೂ, ಬಸವಪ್ಪ ಶಾಸ್ತ್ರಿಗಳ ಶಾಕುಂತಳ ನಾಟಕಾನುವಾದವೂ ನನಗೆ ಬಹಳ ಮಟ್ಟಿಗೆ ಪ್ರಯೋಜನ ಮಾಡಿವೆ.

**ಜೆ. ವಿ. ಬಿ.**

ಮಿತ್ರಮಂಡಳಿಯ ಸಂಸ್ಥಾಪಕ

ತ್ಯಾಗಮೂರ್ತಿ ದಿವಂಗತ

## ಕಣ್ಣಂದೂರು ರಾಘವಾಚಾರ್ಯರ

ಸ್ಮಾರಕವಾಗಿ

ಮಂಗಳೂರು ಮಿತ್ರಮಂಡಳಿಗೆ

ಸಮರ್ಪಣೆ

# ಮುನ್ನುಡಿ

ಇಡಿ ಭೂಲೋಕದಲ್ಲಿ ಅತ್ಯುತ್ಕೃಷ್ಟವಾದ ಆರು ನಾಟಕಗ್ರಂಥಗಳ ಹೆಸರುಗಳನ್ನು ಹೇಳಬೇಕೆಂದಾದರೆ, ಕಾಳಿದಾಸ ಕವಿಯು ಸಂಸ್ಕೃತದಲ್ಲಿ ರಚಿಸಿದ ಅಭಿಜ್ಞಾನ ಶಾಕುಂತಳ ನಾಟಕವು ಆ ಆರರಲ್ಲಿ ಒಂದಾಗಿ ಬಾರದಿರದು. ಮೂಲ ಕವಿಯು ಶೇಕ್ಸಪಿಯರಿಗಿಂತ ಬಹು ಪುರಾತನನಾಗಿ ಅವನಂತೆ ಎಲ್ಲಾ ಕಾಲಕ್ಕೂ ಬರೆಯುವ ಗುಣವಿದ್ದವನು. ಅನುಶ್ರುತಿಯಾಗಿ ಕವಿಯು ಕ್ರಿಸ್ತಪೂರ್ವ ಒಂದನೆಯ ಶತಮಾನದಲ್ಲಿ ಉಜ್ಜಯಿನೀ ನಗರವುಳ್ಳ ಮಧ್ಯದೇಶದಲ್ಲಿ ಭೋಜರಾಜನೆಂಬುವನ ಆಸ್ಥಾನದಲ್ಲಿದ್ದನೆಂದುಂಟು. ರೇಖಾಮೂಲಕವಾಗಿ ಆತನ ದಾತನು ಅಲ್ಲಿಯ ವಿಕ್ರಮಾದಿತ್ಯರಾಯನೆಂದುಂಟು. ವಿಕ್ರಮಾದಿತ್ಯನೆಂಬ ಹೆಸರುಳ್ಳ ರಾಜರು ಅನೇಕರಿದ್ದರೆಂತಲೂ, ಕವಿಯ ದಾತನು ಕ್ರಿಸ್ತಾಬ್ದ ಆರನೆಯ ಶತಮಾನದ ವಿಕ್ರಮಾದಿತ್ಯನೆಂತಲೂ, ಆ ರಾಜನೇ ಸಂವಚ್ಛಕಪುರುಷನೆಂತಲೂ, ಮ್ಲೇಚ್ಛರನ್ನು ಜಯಿಸಿ ಆರನೂರು ವರ್ಷಕ್ಕೆ ಶಕವನ್ನು ಹಿಂದಿಟ್ಟನೆಂತಲೂ ಈಗಿನ ಒಂದು ಊಹೆ. ಕೆಲವರು ಕವಿಯ ಕಾಲವನ್ನು ಇನ್ನು ಒಂದು ಶತಮಾನಕ್ಕಾದರೂ ಹಿಂದೆ ತಳ್ಳುವರು. ಜಾತಿಯಲ್ಲಿ ಗೌಡ ಬ್ರಾಹ್ಮಣನಂತೆ. ಶಾಕುಂತಳ ನಾಟಕವನ್ನು ಕನ್ನಡದಲ್ಲಿ ಗದ್ಯಕಥಾರೂಪವಾಗಿ ಪ್ರಸ್ತುತ ಗ್ರಂಥದಲ್ಲಿ ಬರೆದಿದೆ.

ಅಲ್ಪ ಕಾಲಕ್ಕೆ ಹಿಂದೆ ನಮ್ಮ ಮಾತೃಭೂಮಿಯ ಸಂಸ್ಕೃತಾದಿ ಭಾಷೆಗಳಲ್ಲಿ ಪದ್ಯ ಕಾವ್ಯಗಳಲ್ಲದೆ ಗದ್ಯರೂಪವಾದ ಗ್ರಂಥಗಳು ಬಹು ದುರ್ಲಭವಾಗಿದ್ದುವು. ವೈದ್ಯಶಲ್ಯಶಾಸ್ತ್ರಗಳು, ವ್ಯಾಕರಣ ಛಂದಸ್ಸುಗಳು, ನಿಘಂಟು ಕೂಡ ಪದ್ಯರೂಪ. ಲಿಪಿಯಿಲ್ಲದ ಬಹು ಪೂರ್ವಕಾಲದಲ್ಲಿ ಪದ್ಯರೂಪವು ಸ್ಮರಣೆಗೂ ಪಾಠಕ್ಕೂ ಅನುಕೂಲವಾಗಿತ್ತಷ್ಟೆ! ಲಿಪಿ ರಚನೆಯನಂತರವೂ ಬಹು ಕಾಲ ಪದ್ಯರೂಪವೇ ಮುಂಚಿನಂತೆ ರೂಢಿಯಿತ್ತು. ಗ್ರಂಥವನ್ನು ತಾಳೆಯೆಲೆಗಳಲ್ಲಿ ಒಂದೊಂದಾಗಿ ಪ್ರಯಾಸಪಟ್ಟು ಬರೆಯಬೇಕು. ಅಂತಹ ಗ್ರಂಥವು ಸಿಕ್ಕುವುದು ದುರ್ಲಭ; ಸಿಕ್ಕಿ

ದರೆ ಬೆಲೆ ಸುಲಭವಲ್ಲ. ಗದ್ಯವನ್ನು ಪದ್ಯಕಾವ್ಯದಂತೆ ಸಂಕೋಚವಾಗಿ ಬರೆಯಲು ಮನಸ್ಸು ಬಾರದು. ಗದ್ಯದ ವಿರಳತೆಗೆ ಇವೇ ಕಾರಣಗಳು.

ಮುದ್ರಣಸಹಾಯದಿಂದ ಮುಂಚೆ ಇದ್ದ ಪ್ರಚಾರದ ಅನನುಕೂಲತೆಗಳು ಹೆಚ್ಚುಕಡಿಮೆ ಎಲ್ಲವು ಕಳೆದು ಹೋದುವು. ಆದರೂ ಬಹುಕಾಲದಿಂದಿದ್ದ ಪದ್ಯಕಾವ್ಯದ ವಾಡಿಕೆಯು ಆಗಲೆ ಬಿಟ್ಟು ಹೋಗಲಿಲ್ಲ. ಹಿರಿಯರು ನೆಟ್ಟ ಆಲದ ಮರನ ಕಥೆಯಾಯ್ತು. ಆದರೆ ಹೇಗೆ ಹೇಗೆ ಬರಹ ಬಲ್ಲವರ ಸಂಖ್ಯೆಯು ಏರುತ್ತ ಬಂದಿತೋ, ಹೇಗೆ ಹೇಗೆ ಪ್ರಚಾರದ ಸೌಕರ್ಯಗಳು ವರ್ಧಿಸಿ ಗಣ್ಯವಾದುವೋ, ಹಾಗೆ ಹಾಗೆಲ್ಲ ಸುಲಭವಾದ ಬಹಳ ಗ್ರಂಥಗಳಿಗೆ ಗ್ರಾಹಕರೊದಗಿದರು, ಹಾಗೆ ಹಾಗೆಲ್ಲ ಆ ತಗಾದೆಯ ಶಮನಕ್ಕೋಸ್ಕರ ಬರೆಯಬೇಕಾಯಿತು. ಪದ್ಯರೂಪವು ರಚನೆಗೂ ಪಾಠಕ್ಕೂ ಸುಲಭವಲ್ಲ; ವಿಪುಲವಾಗಿ ಬರೆಯಲಿಕ್ಕೂ ಬಾರದು. ಹೀಗೆ ಗದ್ಯಕ್ಕೊಂದು ಸುಯೋಗವು ಬಂದೊದಗಿತು.

ಗದ್ಯ ಗ್ರಂಥಗಳು ತಲೆಯೆತ್ತಿದುದು ಇತ್ತೀಚೆಗೆ; ಪ್ರಾಯಶಃ ಪ್ರಚಲಿತ ಪೀಳಿಗೆಯಲ್ಲೆನ್ನಬಹುದು. ಇಷ್ಟು ಪುಟ್ಟ ಕೂಸಿಗೆ ತೊದಲ್ನುಡಿಯ ವಾಸನೆ ಇರುವುದು ಚೋದ್ಯವಲ್ಲ. ಶೈಲಿಸರಣಿಗಳು ನೆಲಸಿ ಬೇರೂರಲಿಲ್ಲ. ಮುದ್ರಾಯಂತ್ರವನ್ನು ಸ್ಥಾಪಿಸಿ ಯಾವ ಹೇತುವಿನಿಂದಲಾದರೂ ಕಷ್ಟಪಟ್ಟು ಪ್ರಚುರಗೊಳಿಸಿದ ಒಂದು ಬಗೆಯ ಕನ್ನಡಕ್ಕೆ 'ಪಾದರಿ ಕನ್ನಡ' ವೆಂದು ಧಿಕ್ಕಾರದಿಂದೆಂಬಂತೆ ಮೂಗಿಗೆ ಸುಕ್ಕು ಹಾಕಿ ನುಡಿಯುವವರು ಕೃತಘ್ನರು. 'ಮುದುಕರ ಕಿರೀಟವು ಮಕ್ಕಳ ಮಕ್ಕಳೇ,' ಎಂದೂ, 'ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನಿಮಗೆ ಅಯ್ಯೋ,' ಎಂದೂ ಬರೆದುದುಂಟು, ನಿಜ. ಆದರೆ, ಹೇಗಾದರೂ ಬರೆದು ಆಗಲೆ ಪುಸ್ತಕಗಳನ್ನು ಪ್ರಕಟಿಸದೆ ಇರುತ್ತಿದ್ದರೆ ಸಾಧಾರಣ ಜನರಿಗೆ ತಿಳಿಯುವಂತೆ ಇಷ್ಟರ ತನಕ ಯಾವುದೊಂದು ಶೈಲಿಯೂ ಅರಳದೆ ಇರುತ್ತಿತ್ತು. ಅಂತಹ ವಿಕಾಸವು ಈಗಲೂ ಪರಿಪೂರ್ಣವಾಗಿದೆ ಎನ್ನಲು ಅವಕಾಶವಿಲ್ಲ. ಸಾಹಿತ್ಯಸಾಮಗ್ರಿಯನ್ನು ಹಳೆಯ ಆಚಾರದ ಬರೆಹಗಾರರಿಂದ ಕಿತ್ತುಕೊಂಡುದೇನೋ ಸುಭಗವೇ. ಆದರೆ ಕಿತ್ತುಕೊಂಡ ಸುಧಾರಣಿಕ ಪ್ರಾಣಿಗಳಲ್ಲಿ ಹಲವರು ಎಚ್ಚತ್ತು ಇನ್ನೊಂದು ಗುಂಡಿಯಲ್ಲಿ ಬೀಳಲಿಕ್ಕೆ ಪ್ರಾರಂಭ. ಅಂದರೆ, ಭಾವನೆ ಇಂಗ್ಲಿಷಿನಲ್ಲಿ, ಭಾಷಾಂತರ ಕನ್ನಡದಲ್ಲಿ;

ಭಾಷೆ ಕನ್ನಡ, ವಾಕ್ಯರಚನೆಯ ವಿಧಿ ಇಂಗ್ಲಿಷು. ಹೀಗಾಗಬಾರದೆಂದು ಕೆಲವು ಸಾಹಿತಿವಿಮರ್ಶಕರಿಗೆ ಕಂಡು ಬಂದುದು ಕರ್ಣಾಟಕ ಭಾಷಾ ದೇವಿಯ ಭಾಗ್ಯ.

ಪ್ರಸ್ತುತ ಗ್ರಂಥದಲ್ಲಿ ಅಂತಹ ದೋಷವು ಇರುವುದಾಗಿ ಕಾಣಲಿಲ್ಲ. ಶೈಲಿಯೂ ವಾಕ್ಸರಣಿಯೂ ಸಹಜವಾಗಿಯೂ ಅನತಿಕ್ಲಿಷ್ಟವಾಗಿಯೂ ಇದೆ. ಅತಿ ಸುಲಭವಾಗಿ, 'ಎಲ್ಲರೂ ತಿಳಿಯುವಂತೆ,' ಬರೆಯಬೇಕೆಂದು ಹೇಳುವವರುಂಟು. ಆದರೆ ಅಲ್ಪಾಯಾಸವೂ ಇಲ್ಲದೆ ಓದಿ ತಿಳಿಯ ಲಾಗುವುದಾದರೆ ಭಾಷಾವಿಜ್ಞಾನವು ಇದ್ದಲ್ಲಿಯೆ ಇರದೆ? ಪರಂತು ಪಾಂಡಿತ್ಯವನ್ನು ತೋರಿಸುವುದಕ್ಕೆ ಮಾತ್ರ ಕ್ಲಿಷ್ಟವಾದ ಶೈಲಿಸರಣಿಗಳನ್ನು ಇಟ್ಟರೆ, ಅವಜ್ಞೆಯ ಘಟನೆ ಉಂಟಾಗಬಹುದು. ಮಧ್ಯ ಮಾರ್ಗವೇ ಉತ್ತಮವಲ್ಲವೇ? **'ಅತಿ ಸರ್ವತ್ರ ವರ್ಜಯೇತ್'**. ಗ್ರಂಥಕರ್ತರು, ಕೇವಲ ಯುವಕರಾಗಿಯೂ ಭಾಷೋತ್ಸಾಹಿಗಳು, ಸಾಹಿತ್ಯಭಕ್ತರು. ಬರವಣಿಗೆಯಲ್ಲಿ ಶ್ರದ್ಧಾಸಕ್ತಿಯಿಂದ ಮನಃಪೂರ್ತಿಯಾಗಿ ತೊಳಲು ವವರು. ಸಾಕಷ್ಟು ನುರಿತವರಲ್ಲವೆಂದಾದರೂ ಕೂಡ, ಸಾಹಿತ್ಯ ವಿಜ್ಞಾನ ದಲ್ಲಿ ಎದೆಗೊಟ್ಟು ಮುನ್ನಡೆಯುವವರಲ್ಲದೆ ಹಿಂಜರಿಯುವವರಲ್ಲ ವೆಂಬುದು ಪ್ರತ್ಯಕ್ಷವಾಗುವುದು. ಇನ್ನೂ ಅನೇಕರು ಈ ರೀತಿಯಾಗಿಯೇ ಕೂಡಿದಷ್ಟು ವ್ಯಾಕರಣ ಶುದ್ಧವುಳ್ಳ ಮತ್ತು ಅಲ್ಪಾಯಾಸದಿಂದ ಅರಿಯ ಲಾಗುವ ಪರಿಷ್ಕೃತ ವಾಕ್ಸರಣಿಯಲ್ಲಿ ಗದ್ಯಸಾಹಿತ್ಯವನ್ನು ಬರೆದು ಬೆಳೆ ಯಿಸಲೆಂಬ ಕೋರಿಕೆ.

ಮಂಗಳೂರು,<br>14ನೇ ಡಿಸೆಂಬರ್ 1934

M. Narasing Rao



मंदः कवियशः प्रार्थी गमिष्याम्युपहास्यताम् ।
प्रांशुलभ्ये फले लोभादुद्बाहुरिव वामनः ॥ १ ॥

अथवा कृतवाग्द्वारे ग्रंथेऽस्मिन् पूर्वसूरिणा ।
मणौ वज्रसमुत्कीर्णे सूत्रस्येवास्ति मे गतिः ॥ २ ॥

# ಶಕುಂತಳೆ

## ೧. ಮೃಗಯಾವಿಹಾರ



ಅಭಿಜ್ಞಾನ ಶಾಕುಂತಳದ ಕಥೆಯು ಜಗತ್ಪ್ರಸಿದ್ಧವಾಗಿದೆ. ಕವಿಶ್ರೇಷ್ಠನಾದ ಕಾಳಿದಾಸನು ಮಹಾಭಾರತದ ಉಪಾಖ್ಯಾನವೊಂದನ್ನು ಆಧಾರವಾಗಿಟ್ಟುಕೊಂಡು ಈ ಕಥೆಯನ್ನು ಸಂಸ್ಕೃತ ಭಾಷೆಯಲ್ಲಿ ವಿರಚಿಸಿದನು. ಕಾಲದ ದಟ್ಟಡವಿಯಲ್ಲಿ ಹುಟ್ಟಿ, ಶತಮಾನಗಳ ಬೆಟ್ಟಗಳನ್ನು ಕೊರೆದು, ಸಂಪತ್ಸಮೃದ್ಧಸಾಮ್ರಾಜ್ಯಗಳ ಭಗ್ನಾವಶೇಷಗಳಲ್ಲಿ ಹರಿದು, ಅನಂತವಾದ ಸಾಗರಕ್ಕೆ ಇದರ ಒರತೆಯು ಹರಿಯುತ್ತಿದೆ. ಸಾಮ್ರಾಜ್ಯಗಳು ಮುರಿದರೂ, ಜನಾಂಗಗಳು ಬಲಗುಂದಿದರೂ, ಈ ಕಥೆಯ ಸಂಸ್ಕೃತಿಯು ಮಾಲಿನ್ಯವನ್ನು ಹೊಂದಿಲ್ಲ. ಇದರೊಳಗಿನ ಆಚಾರವಿಚಾರಗಳು, ರೀತಿನೀತಿಗಳು, ನಡೆನುಡಿಗಳು, ಭಕ್ತಿವಿಶ್ವಾಸಗಳು–ಇನ್ನೂ ನಮ್ಮ ಜೀವನದಲ್ಲಿ ಹೊಸ ಹುರುಪನ್ನು ತೋರಿಸಿ, ನವಚೇತನವನ್ನು ಕೊಡಬಲ್ಲುವು. ಈ ಕಥೆಯಲ್ಲಿ ಪ್ರತಿಪಾದಿತವಾದ ತತ್ವವು ಸ್ವರ್ಗೀಯವಾದ ಪ್ರೇಮವಾಗಿರುತ್ತದೆ. ಗಂಡಹೆಂಡಿರಲ್ಲಿ ಹುಟ್ಟುವ, ತಂದೆಮಕ್ಕಳಲ್ಲಿರುವ, ಗೆಳತಿಗೆಳೆಯರಲ್ಲಿ ತೋರುವ ಸ್ವಾಭಾವಿಕವಾದ ಪ್ರೇಮವು ಚಮತ್ಕಾರವಾಗಿ ಈ ಕಥೆಯಲ್ಲಿ ವರ್ಣಿತವಾಗಿದೆ. ಬಹಳವೇನು? ಸಂಸಾರವು ಪರಸ್ಪರ ಪ್ರೇಮದಿಂದ ಹೊಂದಿರುವುದರಿಂದ ಈ ಕಥೆಯ ಮನನವು ನಮಗೆ ಬಹಳ ಮಟ್ಟಿಗೆ ಪ್ರಯೋಜನವಾಗಬಹುದು. ಮಾತ್ರವಲ್ಲ, ನಮ್ಮ ವಿಚಾರಗಳನ್ನೂ ಅಭಿಪ್ರಾಯಗಳನ್ನೂ ಸರಿಪಡಿಸಿ, ನಮ್ಮ ಸ್ಥಿತಿಗತಿಗಳನ್ನು ಇದು ಸುಧಾರಿಸಬಲ್ಲುದು.

ನಮ್ಮ ದೇಶವನ್ನು ಭರತಭೂಮಿಯೆಂದು ಯಾವ ಪುಣ್ಯಪುರುಷನ ಸುಂದರವಾದ ಹೆಸರಿನಿಂದ ಕರೆಯುತ್ತಿರುವೆವೊ, ಆ ಭರತಚಕ್ರವರ್ತಿಯ ತಂದೆತಾಯ್ಗಳ ಪವಿತ್ರವಾದ ಕಥೆಯಿದಾಗಿದೆ. ಆಸೇತುಹಿಮಾಚಲದ ಭೂಮಿಗೆ ಒಡೆಯನಾಗಿ, ಅದಷ್ಟು ಭೂಮಿಯನ್ನು ತನ್ನ ಹೆಸರಿನಿಂದ ಕರೆಯಿಸುವಷ್ಟು ಯೋಗ್ಯತೆಯನ್ನು ಸಂಪಾದಿಸಿದ ಭರತನನ್ನು ಪುತ್ರ ನನ್ನಾಗಿ ಪಡೆದ ದುಷ್ಯಂತ ಶಕುಂತಳೆಯರು ಅವನಿಗಿಂತಲೂ ಮಿಗಿಲಾದ ಭಾಗ್ಯವಂತರಾಗಿದ್ದಿರಬೇಕಲ್ಲವೆ? ಈ ತಂದೆತಾಯ್ಗಳ ನಡತೆಯು ಬಹಳ ಉದಾತ್ತವಾಗಿದ್ದಿರಬೇಕಲ್ಲವೆ? ಇಲ್ಲದಿದ್ದರೆ, 'ಪುತ್ರಾದಿಚ್ಛೇತ್ ಪರಾ ಜಯಮ್' ಎಂಬ ಪೂರ್ವಿಕರ ಮಾತಿನಂತೆ ತಮಗಿಂತಲೂ ಶ್ರೇಷ್ಠನಾದ ಪುತ್ರನನ್ನು ಪಡೆಯುವಷ್ಟು ಪುಣ್ಯಶಾಲಿಗಳು ಅವರಾಗುತ್ತಿರಲಿಲ್ಲ.

ದುಷ್ಯಂತನು ಹಸ್ತಿನಾವತಿಯ ಮಹಾರಾಜನಾಗಿದ್ದನು. ಈತನು ದೃಢಕಾಯನೂ ಸುಶೀಲನೂ ಆಗಿದ್ದನು. ಈತನು ಶತ್ರುಗಳಿಗೆ ಮಣಿದವ ನಲ್ಲ; ಋಷಿಗಳಿಗೆ ಸನ್ಮಾನಿಸಿ ದಣಿದವನಲ್ಲ. ವೃಕ್ಷಾದಿಗಳು ಬಿಸಿಲಿನ ಬೇಗೆಗೆ ತಲೆಕೊಟ್ಟು ನೆರಳಿತ್ತು ಆಶ್ರಿತರನ್ನು ತಣಿಸುವಂತೆ, ತನ್ನ ಸುಖ ವನ್ನೆಣಿಸದೆ, ಪ್ರಜೆಗಳನ್ನು ರಕ್ಷಿಸಲಿಕ್ಕೆ ಯಥಾಶಕ್ತಿ ಈತನು ಪ್ರಯತ್ನಿಸು ತ್ತಿದ್ದನು. ದುರ್ಮಾರ್ಗದಲ್ಲಿ ವರ್ತಿಸುವ ಜನರನ್ನು ತಡೆದು, ಜನರ ವಿವಾದಗಳನ್ನು ಯಥಾನ್ಯಾಯವಾಗಿ ಬಿಡಿಸಿ, ಜನರ ರಕ್ಷಾಶಿಕ್ಷೆಯಲ್ಲಿ ಅಗ್ಗಳನೆನಿಸಿ, ಪೊಡವಿಗೆ ಒಡೆಯನಾಗಿ, ಪ್ರಜೆಗಳಿಗೆ ಬಂಧುವಾಗಿ ಈತನು ಪ್ರಖ್ಯಾತಿಯನ್ನು ಹೊಂದಿದ್ದನು. ಸೂರ್ಯನು ಯಾವಾಗಲೂ ರಥಾ ರೋಹಿಯಾಗಿರುವಂತೆ, ಗಾಳಿಯು ಹಗಲಿರುಳೂ ಸಂಚಲಿಸುವಂತೆ, ಮಹಾ ಶೇಷನು ಭೂಮಿಯ ಭಾರವನ್ನು ಅಹರ್ನಿಶವೂ ಹೊತ್ತುಕೊಳ್ಳುವಂತೆ, ಈ ಮಹಾರಾಜನು ತನ್ನ ದೇಶವನ್ನು ರಕ್ಷಿಸಿ ತನ್ನ ಪ್ರಜೆಗಳಿಗಾಗಿ ಕ್ಲೇಶ ಪಡುತ್ತಿದ್ದನು. ಆದುದರಿಂದಲೆ, ಈತನ ಕೀರ್ತಿಯು ಇಂದ್ರಲೋಕಕ್ಕೂ ಮುಟ್ಟಿತ್ತು. ಸ್ವರ್ಗದೊಡೆಯನಾದ ಇಂದ್ರನು ಈತನ ಪರಮಸಖನಾಗಿ ದ್ದನು. ಶತ್ರುಗಳಾದ ರಾಕ್ಷಸರ ಮುಂಡಗಳನ್ನು ಚೆಂಡಾಡಿ, ಮೂರು ಲೋಕಗಳ ಕಂಟಕಗಳನ್ನು ಹೋಗಲಾಡಿಸಿ, ಸುಖಪರನಾದ ಇಂದ್ರ ನಿಗೆ ಉಪಕಾರ ಮಾಡಿದವರೆಂದರೆ ಅಭೇದ್ಯವಾದ ಧನುಸ್ಸುಳ್ಳ ದುಷ್ಯಂತ

ನೊಬ್ಬನು, ಹರಿತವಾದ ಉಗುರುಗಳುಳ್ಳ ನೃಸಿಂಹನಿನ್ನೊಬ್ಬನು. ಸಂತೋಷ ಪಟ್ಟ ಇಂದ್ರನೊಮ್ಮೆ ದೇವರ್ಷಿ ಪಿತೃ ಗಂಧರ್ವರಿಂದ ಕೂಡಿದ ಸಭೆಯಲ್ಲಿ ತನ್ನ ಆಸನದರ್ಧದಲ್ಲಿ ದುಷ್ಷಂತನನ್ನು ಕುಳ್ಳಿರಿಸಿ, ಆತನ ಕೊರಳನ್ನು ತನ್ನ ಮಂದಾರಮಾಲೆಯಿಂದ ಸಿಂಗರಿಸಿ ಸತ್ಕರಿಸಿದ್ದನು. ಇಂತಹ ಬಹು ಮಾನಕ್ಕೆ ಇಂದ್ರನ ಮಗನಾದ ಜಯಂತನೂ ಕೂಡ ಅಸೂಯೆ ಪಟ್ಟಿದ್ದನು.

ಈ ರಾಜನೊಮ್ಮೆ ಮೃಗಯಾವಿಹಾರಿಯಾಗಿ ಹಿಮಾಲಯದ ಬುಡದಲ್ಲಿದ್ದ ಕಾಡುಗಳನ್ನು ಪ್ರವೇಶಿಸಿದನು. ಬಹು ಪೂರ್ವಕಾಲದಲ್ಲಿ ಪೃಥ್ವಿಯು ಈಗಿನಷ್ಟು ನಿರ್ಭಯಾಕಾರವಾಗಿರಲಿಲ್ಲ. ಆಗ ಭೂಪೃಷ್ಠ ವೆಲ್ಲ ಕಾಡುಗಳಿಂದ ತುಂಬಿದ್ದು, ಮನುಷ್ಯರು ಹುಲಿಕರಡಿಗಳೊಡನೆ ಜೀವಿಸುತ್ತಿದ್ದರು. ಆದರೆ ಕ್ರಮೇಣ ಜನರು ಕಾಡನ್ನೆಲ್ಲ ಕಡಿದು, ನಾಡನ್ನು ಕಟ್ಟಿದುದರಿಂದಲೆ, ಇಂದು ಕಾಡುಗಳು ವಿರಳವಾಗಿರುವುವು. ಪೂರ್ವ ಕಾಲದಲ್ಲಿ ಋಷಿಗಳು ಅಲ್ಲಲ್ಲಿ ಕಾಡುಗಳನ್ನು ಕಡಿದು, ಆಶ್ರಮಗಳನ್ನು ಮಾಡಿಕೊಂಡು, ನಿರ್ಭಯರಾಗಿ ತಮ್ಮ ಜಪತಪೋನುಷ್ಠಾನಗಳಲ್ಲಿ ತನ್ಮಯ ರಾಗಿರುತ್ತಿದ್ದರೂ, ದುಷ್ಷಂತನಂತಹ ಅರಸರ ಮೃಗಯಾಪ್ರವೃತ್ತಿಯು ಅವರಿಗೆ ಬಹಳ ಮಟ್ಟಿಗೆ ಪ್ರಯೋಜನಕರವಾಗುತ್ತಿತ್ತು. ಏಕೆಂದರೆ, ಆ ಕಾಲದಲ್ಲಿ ಅರಸರೂ ಇತರ ಕ್ಷತ್ರಿಯರೂ ಬೇಟೆಯೆಂದು ಕಾಡುಕಾಡು ಗಳಲ್ಲಿ ಸುತ್ತಾಡಿ, ವನ್ಯಮೃಗಗಳನ್ನು ಕೊಂದು, ಜನಸಾಮಾನ್ಯರಿಗೆ ಅವುಗಳಿಂದುಂಟಾಗುವ ಬಾಧೆಯನ್ನು ಹೋಗಲಾಡಿಸುತ್ತಿದ್ದರು.

ಬೇಟೆಯೆಂಬುದು ಸಪ್ತವ್ಯಸನಗಳಲ್ಲಿ ಒಂದೆಂದು ನಮ್ಮ ಹಿರಿಯರು ಎನ್ನುವುದುಂಟು. ಜೂಜಿನಂತೆ ಬೇಟೆಯೂ ಸರ್ವನಾಶಕ್ಕೆ ಕಾರಣವಾಗ ಬಹುದು. ಬೇಟೆಯೆಂದು ಹಗಲಿರುಳು ವನದಿಂದ ವನಕ್ಕೆ ಅಲೆದು, ದೇವರು ಕೊಟ್ಟ ಅಮೂಲ್ಯವಾದ ತಮ್ಮ ಸಮಯವನ್ನೂ ಬಡವರು ಸಲ್ಲಿ ಸಿದ ತಮ್ಮ ಹೇರಳವಾದ ಸಂಪತ್ತನ್ನೂ ಅರಸರು ಹಾಳುಮಾಡಿರ ಬಹುದು. ಆದರೆ ಮೃಗಯೆಯು ಪ್ರಯೋಜನಕಾರಿಯಾದುದರಿಂದಲೆ ಅದರ ಕೊಂಡಾಟವನ್ನು ಪ್ರಾಚೀನ ಸಾಹಿತ್ಯದಲ್ಲಿ ನಾವು ಕಾಣುತ್ತೇವೆ. ಮೃಗಗಳ ಸಹಿಸಲಾರದಷ್ಟು ಕ್ರೂರವಾದ ಪೀಡೆಯನ್ನು ಹೋಗಲಾಡಿಸುವುದರಲ್ಲಿ

ಬೇಟೆಯೊಂದೆ ಸಾಧನವಾಗಿತ್ತು. ಬೇಟೆಯು ಮೆಚ್ಚುಗೆಗೆ ಪಾತ್ರವಾದುದರಿಂದಲೆ, ಬೇಟೆಯ ವರ್ಣನೆಯಿಲ್ಲದ ಹಳೆಯ ಗ್ರಂಥವಿಲ್ಲ; ಬೇಟೆಯ ಕಥೆಯಿಲ್ಲದ ಪುರಾಣವಿಲ್ಲ. ಪುತ್ರಸಂತಾನವಿಲ್ಲವೆಂದು ದುಃಖಪಡುತ್ತಿದ್ದ ದಶರಥಮಹಾರಾಜನೊಮ್ಮೆ ಬೇಟೆಗಾಗಿ ಹೊಂಚು ಹಾಕಿ ವನದಲ್ಲಿ ಕುಳಿತಿದ್ದಾಗ ತಟಾಕವೊಂದರಲ್ಲಿ ವರಾಹವೊಂದು ನೀರ್ಕುಡಿಯುವುದೆಂದು ಭ್ರಾಂತಿಗೊಂಡು, ನೀರಿಗಾಗಿ ಕೆರೆಗಿಳಿದ ಮುನಿಪುತ್ರನೊಬ್ಬನನ್ನು ಕೊಂದುಬಿಟ್ಟನು. 'ಹಾ, ತಾತ!' ಎಂದವನು ಕೂಗಿದೊಡನೆಯೆ, ಅರಸನು ದಿಗಿಲುಗೊಂಡು ನೋಡುವಾಗ, ಮುನಿಪುತ್ರನು ಮಡಿದಿದ್ದನು. ಆತನ ತಂದೆತಾಯ್ಗಳು ದುಃಖದ ಕಂಬನಿಯನ್ನೆ ಕೈಯಲ್ಲಿ ಹಿಡಿದುಕೊಂಡು, 'ನಮ್ಮಂತೆ ಪುತ್ರಶೋಕದಿಂದ ನೀನು ಮಡಿಯುವೆ'ಯೆಂದು ಶಾಪಕೊಟ್ಟು ಪ್ರಾಣಬಿಟ್ಟರು. ಅರಸನಿಗೆ ಈ ಶಾಪವು ಪ್ರಸಾದವನ್ನೆ ನೀಡಿತು. ಶಾಪದ ಫಲದಿಂದಾಗಿ ಅರಸನು ಪುತ್ರವಂತನಾದನು! ಇಂತಹ ಸುಂದರವಾದ ಕಥೆಗಳ ಸಂಖ್ಯೆಗೆ ಲೆಕ್ಕವೇ ಇರುವುದಿಲ್ಲ. ಅಂತೂ ಬೇಟೆಯು ಪೂರ್ವಿಕರಿಗೆ ಬಹಳ ಮಟ್ಟಿಗೆ ಮೆಚ್ಚುಗೆಯಾಗಿದ್ದಿತೆಂದು ಊಹಿಸಬಹುದು.

ದುಷ್ಯಂತನು ಧನುರ್ಧಾರಿಯಾಗಿ ಕಾಡನ್ನು ಪ್ರವೇಶಿಸಿದನು. ಆತನು ಒಬ್ಬಂಟಿಗನಾಗಿದ್ದಿಲ್ಲ. ಸ್ನೇಹಿತರೂ ಪರಿವಾರದವರೂ ಆತನನ್ನು ಹಿಂಬಾಲಿಸಿದ್ದರು. ಜನಸ್ತೋಮದ ನಿಮಿತ್ತದಿಂದ ಆಕಾಶವೆಲ್ಲ ಧೂಳಿಧೂಸರಿತವಾಯಿತು. ವಾದ್ಯಗಳ ಕೋಲಾಹಲದಿಂದ ಕಾಡೆಲ್ಲ ಶಬ್ದಮಯವಾಯಿತು. ಮಲಗಿದ್ದ ಕಾಡು ಎಚ್ಚರವಾಗಿಬಿಟ್ಟಿತು. ಆನೆಗಳು ಹಿಂಡುಹಿಂಡಾಗಿ ಓಡಲಾರಂಭಿಸಿದುವು. ಕೃಷ್ಣಮೃಗಗಳು ಹೆದರಿ, ಕಿವಿಗೊಟ್ಟು ಶಬ್ದಸ್ಥಾನವನ್ನು ವಿಮರ್ಶಿಸುತ್ತ ಮುನ್ನಡೆದುವು. ಹುಲಿಕರಡಿಗಳು ಆರ್ಭಟಿಸುತ್ತ ತಮ್ಮ ಗುಹೆಗಳಲ್ಲಿಯೆ ಕೆರಳಿ, ಅನಂತರ ಹೊರಬಿದ್ದುವು. ಸಿಂಹಗಳು ತಮ್ಮ ಮೈಯೆಲ್ಲವನ್ನು ದಿಟ್ಟಿಸಿ, ಅನಂತರ ಸುತ್ತುಮುತ್ತಲೂ ಕಣ್ಣನ್ನು ಅರಳಿಸಿ ಹೆದರಿದಂತೆ ತೋರಿ ಪ್ಲುತವಿಟ್ಟು ಹಾರಿದುವು. ಕಾಡೆಲ್ಲ ಚೆಲ್ಲಾಪಿಲ್ಲಿಯಾಯಿತು. ಮರಗಿಡಗಳು ಅರಸನ ಸೈನಿಕರ ಉಪಟಳದಿಂದ ಕಂಪಿಸತೊಡಗಿದುವು. ಹಕ್ಕಿಗಳೆಲ್ಲ "ವಿನಾಶ, ವಿನಾಶ" ಎಂದು ಕೂಗಿದುವು.

ಶೀಘ್ರದಲ್ಲಿಯೆ ಅರಸನೂ ಆತನ ಪರಿವಾರದವರೂ ಅನೇಕಾನೇಕ ಕ್ರೂರ ಮೃಗಗಳನ್ನು ಕೊಂದು, ಋಷಿಗಳ, ಬೇಸಾಯಗಾರರ ಮತ್ತು ಕಾಡಾಡಿಗಳ ಅಭಿನಂದನೆಗೆ ಪಾತ್ರರಾದರು.

ಅರಸನಿಗೆ ತನ್ನ ಧನುಷ್ಟಂಕಾರದಿಂದ ಕೆರಳಿ ಗುಹೆಯಿಂದ ಹೊರಬಿದ್ದ ಕೇಸರಿಯೊಂದು ದೂರದಲ್ಲಿ ಗೋಚರವಾಯಿತು. ಸಮಸ್ತ ವನದ ಏಕಚ್ಛತ್ರಾಧಿಪತ್ಯದಲ್ಲಿ ಮೆರೆದು, ಮೃಗರಾಜನೆಂದು ಎಣಿಸಿಕೊಳ್ಳಲ್ಪಟ್ಟು, ತೊರೆಗಳ ಪ್ರವಾಹದಲ್ಲಿ ಬೆಳೆದೆದ್ದ ಬಂಡೆಗಳ ನಡುವೆ ಹುಟ್ಟಿದ ಕುಂಜಗಳ ತಮ್ಮ ಅರಮನೆಗಳಲ್ಲಿ ಶೂನ್ಯದೃಷ್ಟಿಯಿಂದ ಕುಳಿತು, ಹಿಂದು ಮುಂದು, ನಿನ್ನೆ ನಾಳೆ, ಮೇಲು ಕೆಳಗು—ಎಂಬುದೆಲ್ಲವನ್ನೂ ಮರೆತು ಇದ್ದ ಕೇಸರಿಯ ರಾಜಶಬ್ದಕ್ಕೆ ಅರಸನು ಅಸೂಯೆಪಟ್ಟನು. ಆ ಕೇಸರಿಯು ಮನುಷ್ಯರಾಜನನ್ನು ಕಂಡು, ತನ್ನ ಕೇಸರಗಳನ್ನೆಲ್ಲ ಅರಳಿಸಿ, ಮುಖವನ್ನೆಲ್ಲ ವಕ್ರಮಾಡಿ, ಹಲ್ಲುಗಳನ್ನೆಲ್ಲ ಕಿಸಿದು, ಆಯೆಂದು ಘೋಷಮಾಡಿತು. ಒಂದು ಹಜ್ಜೆ ಮುಂದಕ್ಕೆ ಹಾರಿ, ಹುಲ್ಲಿನ ಮೈದಾನಿನಲ್ಲಿ ಪ್ಲುತದ ಮೇಲೆ ಪ್ಲುತವಿಟ್ಟು ದಾಟಿತು. ಕಡೆಗೆ ಸಿಂಹವು ತಾನು ಹಾರಿಬಂದ ಸ್ಥಳದ ಮೇಲೆ ದೃಷ್ಟಿಕ್ಷೇಪವನ್ನು ತಿರುಗಿಸಿ ಸಿಂಹಾವಲೋಕನವನ್ನು ಮಾಡುತ್ತಿದ್ದಾಗ ತಾನೆ, ಅಲ್ಲಿಯೆ ದೂರದಲ್ಲಿ ಹೊಂಚು ಹಾಕಿ ಕುಳಿತ ಅರಸನು ಗುರಿಯಿಟ್ಟು ಹೊಡೆದು, ಬಾಣದಿಂದ ಅದನ್ನು ಕೊಂದುಬಿಟ್ಟನು.

ಆಗಲೆ ಸಮೀಪದಲ್ಲಿ ಚಮರೀಮೃಗವೊಂದು ಧಾವಿಸುತ್ತಿತ್ತು. ಗಾಳಿಯ ವೇಗದಿಂದ ಅದರ ಬಾಲವು ಬೀಸಣಿಗೆಯಂತೆ ತೋರಿ ಅಲ್ಲಿಯೆ ಸಮೀಪವಿದ್ದ ಒಂದು ಸಿಂಹವನ್ನು ಸೆಕೆಗೆ ರೆಕ್ಕೆಯಲ್ಲಿ ಬೀಸಿ ರಾಜೋಪಚಾರಗಳಿಂದ ಮನ್ನಿಸುವಂತಿತ್ತು. ರಾಜನದನ್ನು ಸಹಿಸಲಾರದವನಾದನು. ರಕ್ಷಾಶಿಕ್ಷೆಯಲ್ಲಿ ದಕ್ಷನಾದವನು ತಾನಲ್ಲದೆ ಮತ್ತಾರಿರುವನು ಎಂದು, ಸಿಂಹಕ್ಕೆ ರಾಜೋಪಚಾರವನ್ನು ಮಾಡುವ ಚಮರೀಮೃಗದ ಬಾಲವನ್ನು ಬಾಣಪ್ರಯೋಗ ಮಾಡಿ ರಾಜನು ಕತ್ತರಿಸಿಬಿಟ್ಟನು.

ಇಷ್ಟು ಹೊತ್ತಿಗೆ ಗುಹೆಯ ಕತ್ತಲಿಂದ ಹುಲಿಯೊಂದು ಜೀವದಾಸೆ ಬಿಟ್ಟು ಹೊರಕ್ಕೆ ನೆಗೆಯಿತು. ಅದರ ಮುಖವು ಮರದ ತಳಿಗೋಪುರ

ದಂತಿತ್ತು. ಮೈಮೇಲೆ ತುಂಬ ಚಿತ್ರಗಳಿದ್ದು ಅದು ದೂರದಿಂದ ತೂತಿನ ಮೃಗವೆಂಬಂತೆ ಕಾಣುತ್ತಿತ್ತು. ಹುಲಿಯು ಅರಸನ ಬರುವಿಕೆಯನ್ನು ಕಂಡು, ತನ್ನ ಬಾಲವನ್ನು ನೆಲಕ್ಕಪ್ಪಳಿಸಿ, ಒಳಗೊಳಗೇ ಆರ್ಭಟಿಸುತ್ತ ಅರಸನ ಕತ್ತನ್ನು ಹಿಸುಕುವ ಆಲೋಚನೆಯಿಂದ ಮೈಯನ್ನು ಲಘುಮಾಡಿ ಅರಸನ ಮೈಮೇಲೆ ಹಾರಬೇಕೆಂದಿತ್ತು. ಅಷ್ಟರೊಳಗೆ ಹಸ್ತಲಾಘವವಿದ್ದ ಅರಸನು ಬಾಣಗಳ ಮೇಲೆ ಬಾಣಗಳನ್ನು ಸುರಿದು, ಹುಲಿಯ ಮುಖರಂಧ್ರವನ್ನು ತುಂಬಿಸಿಬಿಟ್ಟನು.

ಆಗ ಅರಸನ ಹಿಂದಿನಿಂದ ಖಡ್ಗಮೃಗವೊಂದು ತನ್ನ ತಲೆಯನ್ನು ಕೆಳಬಗ್ಗಿಸಿ, ದೀರ್ಘೋಚ್ಛ್ವಾಸಗಳನ್ನು ಎಳೆಯುತ್ತ, ಅರಸನ ಮೇಲೆ ರೇಗಿ ಬಂತು. ಅರಸನು ಬಹಳ ಉತ್ಸಾಹದಿಂದ ಹಿಂದಕ್ಕೆ ತಿರುಗಿ ಖಡ್ಗಮೃಗದ ಖಡ್ಗವನ್ನೆ ತರಿದು, ಅದರ ತಲೆಯು ಹೊತ್ತುಕೊಳ್ಳುವ ಭಾರವನ್ನು ಹಗುರವಾಗಿ ಮಾರ್ಪಡಿಸಿದನು. ಅದರ ಹಿಂದೆಯೆ, ಕಾಡೆಮ್ಮೆಯೊಂದು ಇದಿರಾಗಲು, ಅರಸನು ಆಗ ಬಿಟ್ಟ ಬಾಣವು ಎಮ್ಮೆಯ ಕಣ್ಣನ್ನು ಹೊಕ್ಕು, ಮೊದಲು ಎಮ್ಮೆಯನ್ನು ಉರುಳಿಸಿ, ಅನಂತರ ತಾನು ಕೆಳಕ್ಕಿಳಿಯಿತು.

ಇಷ್ಟಾಗುತ್ತಿರಲು, ಪಲ್ವಲಗಳ ಕೆಸರಿನಲ್ಲಿ ಉರುಳುತ್ತಿದ್ದ ವರಾಹಗಳು ಜೀವದಾಸೆಯಿಂದ ಓಡಿಬಿಟ್ಟವು. ಅವುಗಳ ಮೈಯಿಂದ ಕೆಳಸುರಿದ ನೀರಿನ ಮಾರ್ಗವಾಗಿಯೇ ಬೆನ್ನಟ್ಟಿ ಅವುಗಳನ್ನು ಅರಸನು ಇದಿರಾಡಿದನು. ತನ್ನ ವೈರಿಯನ್ನು ಸದೆಬಡೆಯ ಬೇಕೆಂದು ಅವುಗಳಲ್ಲೊಂದು ತನ್ನ ಕೇಸರಗಳನ್ನೆಲ್ಲ ಮೇಲ್ಮಾಡಿ, ಮರವೊಂದನ್ನು ತನ್ನ ಆಧಾರವಾಗಿಟ್ಟುಕೊಂಡು ಹೋರಾಡಿತು. ಅರಸನು ಬಿಟ್ಟ ಕೂರಾದ ಬಾಣವು ವರಾಹದ ನಡುವಿಂದ ಹಾದು ಆಧಾರದ ಮರಕ್ಕೆ ಸಿಕ್ಕಿಕೊಂಡಿತು. ವರಾಹವನ್ನಿರಿದು ಜಯಶೀಲನಾದ ಅರಸನು ಅಲ್ಲಿಂದ ಇನ್ನೊಂದೆಡೆಗೆ ತೆರಳಿದ ಅನಂತರವೂ ಆ ವರಾಹವು ಶತ್ರುವಿನೊಡನೆ ಇನ್ನೂ ಪ್ರತಿಭಟಿಸುವಂತಿತ್ತು; ಶತ್ರುವಿಲ್ಲದಿದ್ದರೂ ಶತ್ರುವಿನೊಡನೆ ಹೋರಾಡುವಂತಿತ್ತು.

ಈ ರೀತಿಯಲ್ಲಿ ನೂರಾರು ಮೃಗಗಳನ್ನು ಕೊಂದು, ಅರಸನ ಹೃದಯವು ಕಠೋರವಾಗಿತ್ತು. ನಿರ್ದಯವಾಗಿ ಪ್ರಾಣಿಹಿಂಸೆಯನ್ನು ಗೈಯು

ತ್ತಿದ್ದುದರಿಂದ ಅವನ ಮನಸ್ಸೂ ಪಶುಸಮಾನವಾಗಿದ್ದಿತು. ಆದರೆ, ಮಹಾತ್ಮರಾದವರ ಮನಸ್ಸು ಕಲ್ಲಿಗಿಂತ ಕಠಿನವೂ ಹೂವಿಗಿಂತ ಕೋಮಲವೂ ಎನ್ನುವುದುಂಟು. ಅರಸನು ಮುಂದಕ್ಕೆ ನಡೆಯುತ್ತಿದ್ದಾಗ ಸಮೀಪದಲ್ಲಿಯೇ ಚೂತವೃಕ್ಷದ ರೆಂಬೆಯಲ್ಲಿ, ಸುಂದರವಾದ ಗರಿಗಳನ್ನು ಕೆಳಗೆ ಜೋಲುಬಿಟ್ಟ ಮಯೂರವೊಂದನ್ನು ಕಂಡನು. ಅರಸನಿಗೆ ಅದನ್ನು ಹೊಡೆಯುವ ಆಶೆಯುಂಟಾಯಿತು. ಆದರೆ ಆ ಜೋಲುಗರಿಗಳು ಹೆಂಗಸರ ಬಿಡುಮುಡಿಯನ್ನು ಹೋಲುತ್ತವೆಂದು, ಅರಸನು ಮರುಕದಿಂದ, 'ಮಯೂರನೆ! ಕುಣಿಕುಣಿದು, ಹಾಡು! ನಾನೀ ಬಾಣವನ್ನು ಆಕಾಶಕ್ಕೆ ಬಿಡುವಾಗ ಉಂಟಾಗುವ ಘೋಷದೊಡನೆ ಓರಿಗೆಯಿಟ್ಟು ಹಾಡುವೆಯಾದರೆ, ಬೇಸಗೆಯಲ್ಲಿ ಮೋಡವು ಗುಡುಗುವಂತೆ ಮಾಡುವೆನೆ'ಂದು ಕಣ್ತಣಿಯೆ ಅದನ್ನು ದಿಟ್ಟಿಸಿದನು; ಮನದಣಿಯೆ ಅದರ ಸೊಬಗನ್ನು ಹೀರಿದನು.

ಆಗಲೆ ಕೃಷ್ಣಮೃಗಗಳ ಹಿಂಡೊಂದು ಬಲದಿಂದ ತಿರುಗಿ ಅರಸನಿಗಿದಿರಾಯಿತು. ಆ ಮೃಗಗಳಿಗೆ ಬಾಯ್ತುಂಬ ಹುಲ್ಲು; ಮುಖ ತುಂಬ ತೃಪ್ತಿ. ಆ ಹಿಂಡಿನ ಮೊದಲಲ್ಲಿ ಕೃಷ್ಣಮೃಗವೊಂದು ತಾನೀ ಹಿಂಡಿಗೆ ಅಧಿಪತಿಯೆಂಬ ಹೆಮ್ಮೆಯಿಂದ ಕೋಡುಗಳನ್ನು ಎತ್ತರವಿಟ್ಟು, ಅಧಿಕಾರದಿಂದ, ಜವಾಬುದಾರಿಕೆಯ ದರ್ಪದಿಂದ ಮುನ್ನಡೆಯುತ್ತಿತ್ತು. ಅದರೊಡನೆ ಹಿಂಡೂ ಮುಂದಕ್ಕೆ ಸರಿಯುತ್ತಿತ್ತು. ಆ ಹಿಂಡಿನಲ್ಲಿ ಹೆಣ್ಣುಮೃಗಗಳೊಡನೆ ಅವುಗಳ ಮರಿಗಳಿದ್ದುವು. ಅವುಗಳು ಮೊಲೆಹಾಲನ್ನು ಆಗಾಗ ಕುಡಿಯಬರುತ್ತಿದ್ದುದರಿಂದ ತಾಯಿಜಿಂಕೆಗಳ ನಡೆಯು ತಡೆಯಲ್ಪಡುತ್ತಿತ್ತು. ಅರಸನು ಹಿಂಡಿನಧಿಪತಿಯ ದರ್ಪಕ್ಕೆ ಅಸೂಯೆಪಟ್ಟನು. ಆತನು ಬತ್ತಳಿಕೆಯಿಂದ ಬಾಣವೊಂದನ್ನು ತೆಗೆದು, ಬಿಲ್ಲಿಗೆ ಹೂಡಿ, ಕಿವಿಯನಕ ಎಳೆದು, ಕಣ್ಣನ್ನು ಸೂಕ್ಷ್ಮವಾಗಿರಿಸಿ, ಗುರಿಯನ್ನು ನಿಶ್ಚಯಮಾಡುವುದರೊಳಗೆ ಹಠಾತ್ತಾಗಿ ಆ ಕೃಷ್ಣಮೃಗದ ಸಹಚರಿಯು ಮುಂದೆ ಬಂದು ತನ್ನ ಪ್ರಿಯನ ದೇಹಕ್ಕೆ ಅಡ್ಡವಾಗಿ ಸುಳಿದಳು. ಆಗ ಅರಸನ ಹೆದೆಬಿಗಿದ ಮುಷ್ಟಿಯು ಒಡೆಯಿತು. ಕಣ್ಣಿಂದ ಒಂದು ತಟಕು ನೀರು ಹನಿಯಿತು. ಅರಸನು ಆ ಮೃಗಗಳ ಹಿಂಡನ್ನು ಕಣ್ತುಂಬ ನೋಡಿ, ಮನ ತುಂಬ ಸಂತೋಷಬಟ್ಟು, ಇನ್ನೊಂದೆಡೆಗೆ ತನ್ನ ರಥವನ್ನು ತಿರುಗಿಸಿದನು.

ಎಲ್ಲಿ ನೋಡಿದರತ್ತ ವಿಶಾಲವಾದ ಬಯಲು ಕಣ್ಗೊಳಿಸುತ್ತಿತ್ತು. ಅದರಲ್ಲಿ ಬೆಳೆದ ಎಳೆಯ ಹುಲ್ಲು ಹುಲುಸಾಗಿ ಬೆಳೆದು ಮನೋಹರವಾಗಿ ತೋರುತ್ತಿತ್ತು. ಅಲ್ಲಿ ಕ್ರೂರ ಮೃಗಗಳ ಹಾವಳಿಯಿದ್ದಂತೆ ತೋರುತ್ತಿರ ಲಿಲ್ಲ. ಎಲ್ಲೆಲ್ಲಿಯೂ ಶಾಂತಿಯು ಮನಸ್ಸಿಗೆ ವಿಶ್ವಾಸವನ್ನೂ, ಕಣ್ಣಿಗೆ ಗಾಂಭೀರ್ಯವನ್ನೂ, ಕಿವಿಗೆ ನಿಶ್ಶಬ್ದತೆಯನ್ನೂ ಮನಗಾಣಿಸುತ್ತಿದ್ದಳು. ಅಲ್ಲೊಂದು ಕಾಲ್ದಾರಿಯಿದ್ದಿತು. ಇದರ ಇಬ್ಬದಿಯಲ್ಲಿ ಬೆಳೆದ ಎಳೆಯ ದರ್ಭೆಗಳನ್ನು ಒಂದು ಜಿಂಕೆ ಮರಿಯು ತಿನ್ನುತ್ತಿತ್ತು. ಅದಕ್ಕೆ ಗುರಿಯಿಟ್ಟು ಹೊಡೆಯಬೇಕೆಂಬ ಉತ್ಕಟವಾದ ಇಚ್ಛೆಯು ಅರಸನಿಗುಂಟಾಯಿತು. ಕೂಡಲೆ ತನ್ನ ರಥವನ್ನು ಅತ್ತ ಓಡಿಸಲು ಸಾರಥಿಗೆ ಆಜ್ಞಾಪಿಸಿ, ಬಿಲ್ಲಿಗೆ ಬಾಣವನ್ನು ಹೂಡಿ ಅರಸನು ಸಿದ್ಧನಾಗುವುದರೊಳಗೆ ರಥಚಕ್ರದ ಕರ್ಕಶ ವಾದ ಶಬ್ದವನ್ನು ತಿಳಿದು, ಆ ಹುಲ್ಲೆಮರಿಯು ಅರ್ಧ ಜಗಿದ ದರ್ಭೆಯನ್ನು ಬಾಯಲ್ಲೆ ಹಿಡಿದುಕೊಂಡು, ಪಲಾಯನ ಮಾಡಿಬಿಟ್ಟಿತು. ಹುಲ್ಲೆ ಮರಿಯು ಬಹಳ ವೇಗವಾಗಿ ಹರಿಯಿತು. ಅದರ ಹಿಂದಕ್ಕೆ ಅರಸನ ರಥವು ಶೀಘ್ರವಾಗಿ ಓಡಿತು. ರಥವೇಗದ ನಿಮಿತ್ತದಿಂದ ಬಹಳ ದೂರದಲ್ಲಿ ದ್ದುದು ಅತಿ ಸೂಕ್ಷ್ಮವಾಗಿ ಅರಸನಿಗೆ ತೋರುತ್ತಿತ್ತು. ಸೂಕ್ಷ್ಮ ವಸ್ತು ವೊಂದು ಕ್ಷಣದಲ್ಲಿಯೇ ಸ್ಥೂಲವಾಗಿ ತೋರಿಬಂದು ಹಿಂದಕ್ಕೆ ಸರಿಯು ವಂತೆ ಕಾಣುತ್ತಿತ್ತು. ಈಗ ಸಮೀಪವಿದ್ದುದು ಕ್ಷಣದಲ್ಲಿ ದೂರಗತವಾಗು ತ್ತಿತ್ತು. ನೈಸರ್ಗಿಕವಾಗಿಯೇ ವಕ್ರವಾಗಿದ್ದ ಮರಗಳ ಸಾಲು ಸಮರೇಖ ವಾಗಿ ತೋರುತ್ತಿತ್ತು. ಮಧ್ಯದಲ್ಲಿ ವಿಚ್ಛಿನ್ನವಾದರೂ ವೃಕ್ಷಗಳ ಪಂಕ್ತಿಯು ಜೋಡಿಸಲ್ಪಟ್ಟಂತೆ ಕಾಣುತ್ತಿತ್ತು. ಈ ತರದ ವಾಯುವೇಗದಿಂದ ಅರಸನ ರಥವು ಓಡಿದರೂ ಶೀಘ್ರವಾಗಿ ಹರಿಯುವ ಆ ಹುಲ್ಲೆಮರಿಗೆ ಗುರಿಯಿಟ್ಟು ಹೊಡೆಯಲಾಗಲಿಲ್ಲ. ಅದಿವನನ್ನು ಬಹಳ ದೂರಕ್ಕೆ ಒಯ್ದಿತು.

ಇಷ್ಟರ ವರೆಗೆ ಭೂಮಿಯು ವಿಷಮವಾಗಿದ್ದು, ಈಗ ತಾನೇ ಅರಸನ ರಥವು ಸಮಪ್ರದೇಶವನ್ನು ಹೊಂದಿತು. ಸಾರಥಿಯು ಕುದುರೆಗಳ ಕಡಿ ವಾಣವನ್ನು ಸಡಿಲು ಬಿಟ್ಟು, ಜಾಗ್ರತೆಯಿಂದ ರಥವನ್ನೋಡಿಸಿದನು. ರಥದ ಕುದುರೆಗಳು ತಮ್ಮೆದುರು ಓಡುತ್ತಿದ್ದ ಜಿಂಕೆಯೊಡನೆ ಸ್ಪರ್ಧಿಸಿ ಧೀಂಕಿ

ಟ್ಟವು. ಅವುಗಳ ತಲೆಯ ಮೇಲಿನ ಜುಟ್ಟು ಮಿಡುಕದೆ ನೆಟ್ಟಗೆ ನಿಂತಿತು. ತಮ್ಮ ದೇಹವನ್ನು ನೀಳವಾಗಿ ಚಾಚಿ, ಅವು ತಮ್ಮ ಕಿವಿಗಳನ್ನು ಮೇಲಕ್ಕೆ ಎತ್ತಿದ್ದವು. ಓಡುವಾಗ ಧೂಳೆದ್ದರೂ, ಆ ಧೂಳು ಅವುಗಳನ್ನು ಮುಟ್ಟುತ್ತಿರಲಿಲ್ಲ.

ಹುಲ್ಲೆಮರಿಯು ಬಹಳವಾಗಿ ದಣಿದಿದ್ದಿತು. ಅದು ಆಗಾಗ ತನ್ನ ಕೊರಳನ್ನು ಕೊಂಕು ಮಾಡಿ, ಹಿಂದೆಯೇ ತನ್ನನ್ನು ಅನುಸರಿಸುತ್ತಿದ್ದ ರಥದಲ್ಲಿ ದೃಷ್ಟಿಯನ್ನಿಡುತ್ತಿತ್ತು. ರಥವನ್ನು ಕಂಡೊಡನೆಯೇ, ವಿವೃದ್ಧ ವೇಗವಾಗಿ ಧರೆಯುಲ್ಲೊಮ್ಮೆಗೆ ಕಾಲಿಟ್ಟು, ಆಕಾಶದಲ್ಲಿಯೇ ಹಾರಿ ಹೋಗುವಂತೆ ಓಡಿ ಅದು ಮರೆಯಾಗುತ್ತಿತ್ತು. ಓಡುವುದರಿಂದ ಆಯಾಸವಾಗಿ ಅದರ ಬಾಯ್ದೆರೆದು ಬಿದ್ದ ದರ್ಭಾಂಕುರದ ಚಿಹ್ನೆಗಳಿಂದ ಮಾರ್ಗವನ್ನು ಊಹಿಸಿ ಅರಸನು ಅದರ ಬೆಂಬತ್ತಿದನು. ಅದು ಹೆದರಿ, ಎಲ್ಲಿ ತನ್ನ ಮೇಲೆ ಅರಸನ ಬಾಣವು ಬೀಳುತ್ತದೋ ಎಂದು ಅರಸನಿಂದ ಆದಷ್ಟು ದೂರವಿರಬೇಕೆಂಬ ಇಚ್ಛೆಯಿಂದ ದೇಹದ ಹಿಂಭಾಗವನ್ನು ಕೂಡ ಮುಂಭಾಗದಲ್ಲಿ ಆಕುಂಚಿಸುತ್ತಿತ್ತು. ಈ ರೀತಿಯಲ್ಲಿ ಜಿಂಕೆಮರಿಯು ಅರಸನನ್ನು ಬಹಳ ದೂರಕ್ಕೆ ಕೊಂಡೊಯ್ದಿತು. ಕಡೆಗೆ ಅದು ಸೋತು ಅರಸನಿಗೆ ಸಮೀಪವಾಗಲು, ಅರಸನು ಬಿಲ್ಲನ್ನೆತ್ತಿ, ಬಾಣವನ್ನು ಹೂಡಿ, ಹೆದೆಯನ್ನು ಜಗ್ಗಿ, ಮೃಗವನ್ನು ಹೊಡೆಯುವುದರೊಳಗೆ, 'ಒಹೋ, ಮಹಾರಾಜನೇ! ಆಶ್ರಮಮೃಗವಿದು ಕೊಲ್ಲತಕ್ಕುದಲ್ಲ,' ಎಂಬ ಮಾತು ಕೇಳಬಂತು. ಅರಸನಿಗಾಶ್ಚರ್ಯವಾಯಿತು. ವನಾಂತರದಲ್ಲಿ ಇವರು ಯಾರಿರಬಹುದೆಂದು ತರ್ಕಿಸಿದನು. ಸಾರಥಿಯು ಅರಸನಿಗೆ ಬಾಣ ಹೊಡೆಯದಿರೆಂದು ಸೂಚಿಸಿದನು. ಮತ್ತು ರಥವನ್ನು ನಿಲ್ಲಿಸಿ ಬಂದವರಾರೆಂದು ನೋಡ ನಿಂತನು.

ಜಿಂಕೆಯ ಬೆಂಬತ್ತಿ, ಘೋರಾರಣ್ಯವನ್ನು ದಾಟಿ, ಅರಸನು ಕಣ್ವಾಶ್ರಮಕ್ಕೆ ಬಂದು ಮುಟ್ಟಿದ್ದನು. ಆತನ ಬಾಣಕ್ಕೂ ಹುಲ್ಲೆಮರಿಗೂ ಅಡ್ಡಲಾಗಿ ಬಂದು, ಅರಸನ ಧನುರ್ವ್ಯಾಪಾರವನ್ನು ತಡೆದವರು ಕೆಲವು ವೈಖಾನಸರಾಗಿದ್ದರು. ಇವರು ಕಣ್ವಾಶ್ರಮದ ಶಿಷ್ಯರು; ಹೋಮಕ್ಕೆ ಸಮಿತ್ತುಗಳನ್ನು ಕೊಯ್ಯುವುದಕ್ಕೆ ಹೊರಟವರು. ಅವರಲ್ಲೊಬ್ಬನು, ತ್ವರೆಯಿಂದ ಮುನ್ನಡೆದು ಬಂದು, ತನ್ನ ಬಲಗೈಯನ್ನೆತ್ತಿ,

"ಎಲೈ ಮಹಾರಾಜನೆ! ಇದು ಆಶ್ರಮಮೃಗವು. ಸಿಡಿಲಿಗೆ ಸಾಟಿಯಾಗಿರುವಂತಹ ನಿನ್ನ ಬಾಣವು ಬಹಳ ಕೋಮಲವಾದ ಹುಲ್ಲೆಮರಿಯ ಮೇಲೆ ಬೀಳುವುದೆ? ಹೂವಿನ ರಾಶಿಯಲ್ಲಿ ಬೆಂಕಿ ಬಿದ್ದಂತಾದೀತು! ಆದುದರಿಂದ ಎಲೈ ಅರಸನೆ, ತೊಟ್ಟ ಬಾಣವನ್ನಿಳಿಸು. ನಿನ್ನಂತಹವರ ಅಸ್ತ್ರವಿದ್ಯೆಯು ದೀನರನ್ನು ಪೊರೆಯುವುದಕ್ಕಲ್ಲದೆ ನಿರಪರಾಧ ಜಂತುಗಳನ್ನು ವಧಿಸಲಿಕ್ಕಲ್ಲವಲ್ಲ!" ಎಂದು ಹೇಳಿಕೊಂಡನು. ಅರಸನಿಗೆ ತನಗಿಂತ ಹಿರಿಯರಲ್ಲಿಯೂ ಜ್ಞಾನಿಗಳಲ್ಲಿಯೂ ತಪಸ್ವಿಗಳಲ್ಲಿಯೂ ಪರಮವಿಶ್ವಾಸವಿದ್ದಿತು; ಭಕ್ತಿಯಿದ್ದಿತು; ಪ್ರೇಮವಿದ್ದಿತು. ಕೂಡಲೆ ತನ್ನ ಬಾಣವನ್ನಿಳಿಸಿ, ಆತನು ಋಷಿಕುಮಾರರ ಅಭಿನಂದನೆಗೆ ಪಾತ್ರವಾದನು. ಅವರು ತಮ್ಮ ಎರಡೂ ಕೈಗಳನ್ನೆತ್ತಿ ಓಡಿ ಹೋಗುತ್ತಿದ್ದ ಹುಲ್ಲೆಮರಿಯನ್ನು ಈಕ್ಷಿಸುತ್ತ, "ವಿನಯಶಾಲಿಯಾದ ಅರಸನೇ! ತನ್ನಂತೆ ಗುಣವಂತನಾಗಿ ಚಕ್ರವರ್ತಿಯಾಗುವ ಪುತ್ರನನ್ನು ಪಡೆಯು," ಎಂದು ಹರಸಿದರು.

ಇಷ್ಟರೊಳಗೆ ಜಿಂಕೆಮರಿಯು ಎಲ್ಲಿಗೋ ಮಾಯವಾಗಿತ್ತು; ಅದು ತನ್ನ ಸಮಾನಬಂಧುಗಳ ಹಿಂಡನ್ನು ಸೇರಿದ್ದು, ಎಲ್ಲವನ್ನು ಮರೆದು, ಆಯಾಸವನ್ನು ಪರಿಹರಿಸುತ್ತಿರಬಹುದು. ಅರಸನು, "ಎಲೈ ಋಷಿಗಳಿರಾ! ನಿಮ್ಮ ವರಪ್ರದಾನದಿಂದ ಅನುಗೃಹೀತನಾದೆನು. ಯಾವ ಜಿಂಕೆಮರಿಯ ಬೆಂಬತ್ತಿ ಬಂದು ತಮ್ಮ ಪ್ರಸಾದದಿಂದ ಅನುಗೃಹೀತನಾದೆನೊ, ಅದರ ಸ್ಪರ್ಶಸುಖವನ್ನು ನನಗೆ ಒದಗಿಸಿ ಕೊಡುವಿರಾದರೆ, ಪೂತನಾದವನು ಮತ್ತೂ ಪಾವನಗೊಳ್ಳುವೆನು," ಎಂದು ಕೃತಜ್ಞತಾಬುದ್ಧಿಯಿಂದ, ಸೌಂದರ್ಯೋಪಾಸನೆಯ ಆಸಕ್ತಿಯಿಂದ ಕೇಳಿದನು. ವೈಖಾನಸರಿಗೆ ಪರಮಸಂತೋಷವಾಯಿತು. ಅವರು ಆತನಿಗೆ ಸ್ವಾಗತವನ್ನು ಬಯಸಿ, "ಎಲೈ ಅರಸನೆ, ಇದು ಕಣ್ವಾಶ್ರಮವು. ಅಗೋ, ದೂರದಲ್ಲಿ ಕಾಣುವವಳೆ ಮಾಲಿನಿಯು. ನೀನಲ್ಲಿಗೆ ಅತಿಥಿಯಾಗಿ ತೆರಳಿದರೆ, ಆಶ್ರಮವಾಸಿಗಳೆಲ್ಲರೂ ಆಭಾರಿಗಳಾಗುವರು. ನೀನಲ್ಲಿ ನಂಬುಗೆಯಿಂದ ಸುಳಿಯುವ ಸಾವಿರಾರು ಹುಲ್ಲೆಮರಿಗಳನ್ನು ಕಾಣುವೆ. ಸ್ವತಂತ್ರವಾಗಿ ಹಾರುತ್ತ ಹಾಡುವ ಪಕ್ಷಿಗಳ ಗಾನವನ್ನು ಕೇಳುವೆ. ಮಾತ್ರವಲ್ಲ, ಬಳ್ಳಿಮನೆಯ ನೆಳಲಿನಲ್ಲಿ ಕಿರಿಬುಗ್ಗೆ ಉಕ್ಕಿ ಬಂದು, ನಿನ್ನ ಪಾದಗಳನ್ನು ತೊಳೆಯುವುದು;

ಪಂಜರದ ಗಿಳಿಯು ನಿನಗೆ ಸ್ವಾಗತವಿತ್ತು, ಮಾತಿನ ಬೆಲ್ಲವನ್ನು ಕೊಡು ವುದು. ವೃಕ್ಷಗಳು ಬಗ್ಗಿ ಬಂದು, ಕೊಂಬೆಗಳ ಆಸನವನ್ನು ನಿನಗೀಯುವುವು. ಬದಿಬದಿಯ ಗಿಡಬಳ್ಳಿಗಳು ಕುಸುಮಗಳ ಮಳೆಯನ್ನು ನಿನ್ನ ಮಸ್ತಕದ ಮೇಲೆ ಸುರಿಸುವುವು. ಮರಗಿಡಗಳು ಫಲಪುಷ್ಪಗಳ ಕಾಣಿಕೆಯನ್ನು ನಿನ್ನ ಚರಣಕ್ಕೊಪ್ಪಿಸುವುವು. ನಾಡಿನ ರಾಜನೆ! ನಿನ್ನ ಕಾಡಿನ ಪ್ರಜೆಗಳನ್ನು ಕಾಣು. ಹೆದೆಯನ್ನು ಜಗ್ಗಿ ಜಗ್ಗಿ ಕರ್ಕಶವಾದ ನಿನ್ನ ತೋಳ್ಗಳ ಕೀರ್ತಿ ಯನ್ನು ವನದೇವತೆಗಳು ಬಿದಿರಮೆಳೆಗಳಲ್ಲಿ ಅವಿತು ಹಾಡುವುದನ್ನಿಲ್ಲಿ ಕೇಳು. ಸುರಲೋಕದ ಇಂದ್ರನೊಡನೆ ಸಖ್ಯವನ್ನು ಬೆಳೆಯಿಸಿ, ಮಳೆ ಬೆಳೆಯು ಚೆನ್ನಾಗುವಂತೆ ಮಾಡಿ ರಕ್ಷಿಸುವ ನಿನ್ನ ಹೆಸರನ್ನು ಆಶ್ರಮದ ಮುನಿಕನ್ನೆಗಳು ಹೊಗಳುವುದನ್ನು ಕಿವಿಯಾರೆ ಕೇಳು. ಕಣ್ಣಾರೆ ನೋಡು. ಇಕೋ, ಇಲ್ಲಿ ಕಾಣುವುದೇ ಕಣ್ವಾಶ್ರಮದ ಮಾರ್ಗವು. ನಾವು ಸಮಿತ್ತುಗಳನ್ನು ಕೊಯ್ಯುವುದಕ್ಕಾಗಿ ಹೊರಟವರು. ಇಲ್ಲದಿದ್ದರೆ, ನಿನ್ನೊ ಡನೆ ಆಶ್ರಮಕ್ಕೆ ಬರುತ್ತಿದ್ದೆವು. ನೀನು ಆಶ್ರಮಕ್ಕೆ ತೆರಳಿ, ನಮ್ಮನ್ನು ಧನ್ಯ ರನ್ನಾಗಿ ಮಾಡು,'' ಎಂದೆಂದರು.

ಅರಸನು ಒಪ್ಪಿದನು; ವೈಖಾನಸರು ತಮ್ಮ ಕೆಲಸಕ್ಕಾಗಿ ಮುನ್ನಡೆ ದರು. ಸಾರಥಿಯು ರಥವನ್ನು ನಡೆಸಿ, ಕಣ್ವಾಶ್ರಮದ ಹೊರಗಿನ ತೋರ ಣದ ವರೆಗೆ ಬಂದುಬಿಟ್ಟನು. ಅರಸನು ಆಗ ರಥವನ್ನು ನಿಲ್ಲ ಹೇಳಿ, ಕುದುರೆಗಳನ್ನು ನೀರಿಗೆ ಬಿಟ್ಟು ತೊಳೆಯಲು ಸಾರಥಿಗೆ ಆಜ್ಞಾಪಿಸಿ, ತನ್ನ ಅರಸೊತ್ತಿಗೆಯ ವಸ್ತ್ರಾಭರಣಗಳನ್ನೆಲ್ಲ ತೆಗೆದಿಟ್ಟು, ವಿನೀತ ವೇಷದಿಂದ ಪಾದಚಾರಿಯಾಗಿ ನಡೆದು, ಕಣ್ವಾಶ್ರಮವನ್ನು ಸೇರಿದನು.

---

# ೨. ಕಣ್ವಾಶ್ರಮ




ರ್ವಕಾಲದಲ್ಲಿ ಋಷ್ಯಾಶ್ರಮಗಳು ಜ್ಞಾನದ ದೀಪವನ್ನು ಹೊತ್ತಿಸಿ, ಜನರ ಮನಸ್ಸಿನ ಅಂಧಕಾರವನ್ನು ಹೋಗಲಾಡಿಸುವಂತಹ ಕ್ಷೇತ್ರಗಳಾಗಿದ್ದುವು. ಈ ಆಶ್ರಮಗಳು ಜನರಲ್ಲಿ ವಿದ್ಯಾಪ್ರಚಾರವನ್ನು ಮಾಡುತ್ತಿದ್ದಂತೆಯೆ, ಜ್ಞಾನದ ಉತ್ತರೋತ್ತರ ಅಭಿವೃದ್ಧಿಗಾಗಿ ಹಗಲಿರುಳು ಸತ್ಯದ ಅನ್ವೇಷಣೆಯನ್ನು ಗೈಯುವ ಸನ್ಯಾಸಿಗಳ ವಾಸಸ್ಥಾನವಾಗಿದ್ದುವು. ಒಂದೊಂದು ಆಶ್ರಮವೂ ಒಬ್ಬೊಬ್ಬ ಕುಲಪತಿಯ ನೇತೃತ್ವದಲ್ಲಿರುತ್ತಿತ್ತು. ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಉಡಲು ಬಟ್ಟೆಯನ್ನೊದಗಿಸಿ, ಉಣ್ಣಲು ಆಹಾರವನ್ನು ಕೊಟ್ಟು, ಅವರಿಗೆ ನನ್ನಿಯನ್ನು ನುಡಿಯಲಿಕ್ಕೂ ತನ್ನಂತೆ ಪರರನ್ನು ಬಗೆಯುವುದಕ್ಕೂ ಕಲಿಸುವವನೆ ಕುಲಪತಿಯಾಗಿದ್ದನು.

ಈ ಋಷ್ಯಾಶ್ರಮಗಳಿಗೆ ಆ ಕಾಲದಲ್ಲಿ ರಾಜಾಶ್ರಯವು ತಪ್ಪುತ್ತಿದ್ದಿಲ್ಲ. ಅರಸರು ಅವರಿಂದ ತೆರಿಗೆಯನ್ನು ಎತ್ತುತ್ತಿದ್ದಿಲ್ಲ; ಬದಲಿಗೆ, ಅವರಿಗೆ ದ್ರವ್ಯಸಹಾಯವನ್ನು ಮಾಡುತ್ತಿದ್ದರು. ಒಮ್ಮೊಮ್ಮೆ ಕುಲಪತಿಯ ಆಶ್ರಮದ ಸುತ್ತುಮುತ್ತಲಿನ ನೂರಾರು ಗ್ರಾಮಗಳಿಂದ ತನಗೆ ಬರುವ ಕಂದಾಯವೆಲ್ಲವನ್ನೂ ಕುಲಪತಿಗೆ ಒಪ್ಪಿಸುವಂತೆ ತನ್ನ ಪ್ರಜೆಗಳಿಗೆ ಆಜ್ಞಾಪಿಸುತ್ತಿದ್ದನು. ಕುಲಪತಿಯು ತಾನು ಮಾಡುವಂತಹ ಜಪತಪೋನುಷ್ಠಾನಗಳ ಆರನೆಯೊಂದಂಶವನ್ನು ತನಗೆ ಬಿಟ್ಟುಕೊಟ್ಟು ತನ್ನನ್ನು ಋಣಿಯನ್ನಾಗಿ ಮಾಡುವನೆಂದು ಅರಸನು ಎಣಿಸುತ್ತಿದ್ದನು.

ಇಂತಹ ಆಶ್ರಮಗಳಿಗೆ ರಾಜಾಶ್ರಯವು ಮಾತ್ರವಲ್ಲ, ಪ್ರಜಾಶ್ರಯವೂ ಬಹಳವಿದ್ದಿತು. ಯಾವ ಸಂಸ್ಥೆಯೇ ಆಗಲಿ, ಅದಕ್ಕೆ ಜನತೆಯ ಬೆಂಬಲವಿಲ್ಲದಿದ್ದರೆ ಅದು ನೆಟ್ಟಗೆ ನಿಲ್ಲಲಾರದು. ಆಶ್ರಮದ

ಸುತ್ತಮುತ್ತಲಿನ ಗೃಹಸ್ಥರೆಲ್ಲರೂ ದವಸಧಾನ್ಯಗಳನ್ನೂ ಹಾಲುಮೊಸರನ್ನೂ ಒದಗಿಸಿ ಋಷಿಗಳು ಕೈಗೊಂಡ ಉದ್ದೇಶಸಾಧನೆಯಲ್ಲಿ ತಾವೂ ತಮ್ಮ ಅಳಿಲಸೇವೆಯನ್ನು ಮಾಡುತ್ತಿದ್ದರು.

ಕಣ್ವನೂ ಕುಲಪತಿಯಾಗಿದ್ದನು. ಆತನು ನಿಷ್ಠಾವಂತನಾಗಿದ್ದನು. ಬ್ರಹ್ಮಚಾರಿಯಾಗಿದ್ದು ಜ್ಞಾನದಲ್ಲಿ, ಸೇವೆಯಲ್ಲಿ, ಗುಣದಲ್ಲಿ ಹೆಸರುವಾಸಿಯಾಗಿದ್ದನು. ಆತನ ಹೆಸರು ಮನೆಮಾತಾಗಿತ್ತು.

ಕಣ್ವಾಶ್ರಮವು ಶಾಂತಿಯ ಬೀಡಾಗಿತ್ತು; ಸೌಂದರ್ಯದ ಗನಿಯಾಗಿತ್ತು; ಸಂತೋಷದ ತವರಾಗಿತ್ತು. ಮುಗಿಲನ್ನು ಚುಂಬಿಸುವ ಬೆಟ್ಟಗಳ ಸಾಲು ದೂರದಲ್ಲಿ ಉನ್ನತವಾಗಿ ನಿಂತು ಕಣ್ವಾಶ್ರಮದ ಕಾವಲುಗಾರರಂತೆ ತೋರುತ್ತಿದ್ದಿತು. ಅವುಗಳ ಬುಡದಲ್ಲಿಯೇ ಮಾಲಿನೀ ನದಿಯು ಹರಿಯುತ್ತಿತ್ತು. ತೀರದಲ್ಲಿ ಬೆಳೆದ ವೃಕ್ಷಗಳ ಜೀರ್ಣಪರ್ಣಗಳು ಬಿದ್ದು ಅದರ ನೀರು ಪಾಂಡುವಾಗಿ ತೋರುತ್ತಿತ್ತು. ಅದರ ನಡುನಡುವೆ ಬೆಳೆದೆದ್ದ ಬಂಡೆಗಳಲ್ಲಿ ಹುಟ್ಟಿದ ಮರಗಿಡಗಳನ್ನು ಬಳ್ಳಿಗಳು ಸುತ್ತುವರಿದು, ಅವುಗಳ ತಳಿರೆಲೆಗಳನ್ನು ತಮ್ಮ ಪುಷ್ಪಸ್ತಬಕಗಳಿಂದ ಅಡಗಿಸಿ ಸುಂದರವಾಗಿ ಕಾಣುತ್ತಿದ್ದುವು. ಅಲ್ಲಲ್ಲಿ ಕಮಲಪುಷ್ಪಗಳ ನೆಳಲಲ್ಲಿ ಹಂಸಮಿಥುನಗಳು ಕಣ್ಣುಗಳನ್ನು ಮುಚ್ಚಿ, ಶಾಂತಿಯ ತೊಡೆಯಲ್ಲಿ ತೂಕಡಿಸುತ್ತಿದ್ದುವು. ಹೊಳೆಯ ಮಳಲ್ದಂಡೆಯಲ್ಲಿ ಬೆಳೆದ ಮರಗಳು ಬಹಳ ಕೆಳಗೆ ತಮ್ಮ ರೆಂಬೆಗಳನ್ನು ಬಗ್ಗಿಸಿ, ತಮ್ಮ ನೆರಳನ್ನು ಇತ್ತಿದ್ದವು. ಆ ಮರಗಳಡಿಯಲ್ಲಿ ಋಷಿಕನ್ಯೆಯರು ಕೂಡಿ, ತಂಪಾದ ಗಾಳಿಯಲ್ಲಿ ವಿಹರಿಸುತ್ತಿದ್ದರು. ನಾನಾ ತರದ ಆಟಗಳನ್ನಾಡಿ ಅವರು ಎಂತಹವರನ್ನೂ ಮುಗ್ಧಗೊಳಿಸುತ್ತಿದ್ದರು. ಗಿಳಿಗಳು ಅಲ್ಲಲ್ಲಿ ಮರಗಳ ಕೋಟರಗಳಲ್ಲಿ ವಾಸ ಮಾಡಿಕೊಂಡು, ಋಷಿಗಳೊಡನೆ ವೇದಪಾಠದಿಂದ ಪರಮಾತ್ಮನನ್ನು ಸ್ತುತಿಸುತ್ತಿದ್ದುವು. ಅಲ್ಲಿಯ ಬಿದಿರಮೆಳೆಗಳು ಗಾಳಿಯಲ್ಲಿ ತೊನೆದಾಡಿ, ಕೊಳಲ ಗಾನದಿಂದ ಋಷಿಗಳ ಜನಕರುಗಳನ್ನು ಆಹ್ಲಾದಪಡಿಸುತ್ತಿದ್ದುವು. ಜಿಂಕೆಯ ಮರಿಗಳು ಆಶ್ರಮದ ಹೊರಗಿನ ಮೈದಾನಿನಲ್ಲಿ ಯಾವ ಶಂಕೆಯೂ ಇಲ್ಲದೆ, ಯಾವ ಭಯವೂ ಇಲ್ಲದೆ, ನಂಬುಗೆಯಿಂದ

ಮೆಲ್ಲಮೆಲ್ಲನೆ ನಡೆಯುತ್ತಿದ್ದುವು. ಮುನ್ನಡೆಯುತ್ತಿದ್ದಂತೆ ಹುಲ್ಲನ್ನು ಮೇಯುತ್ತಿದ್ದುವು. ಹುಲ್ಲನ್ನು ಮೆದ್ದು ಮರಗಳ ಅಡಿಯಲ್ಲಿ ಮಲಗಿ ಮೆಲುಕಾಡುತ್ತಿದ್ದುವು.

ಇಂತಹ ಆಶ್ರಮದಲ್ಲಿ ವಾಸ ಮಾಡುತ್ತಿದ್ದ ಮುನಿವರ್ಯನೆ ಧನ್ಯನು! ಅಂತಹ ಮುನಿವರ್ಯನ ಶಿಷ್ಯರಾಗಿ ವೇದವೇದಾಂತಗಳ ಸಾರವನ್ನು ಹೀರುವ ವಟುಗಳೆ ಪುಣ್ಯಜನ್ಮರು! ಈ ಆಶ್ರಮಕ್ಕೆ ಕಣ್ವನು ಕುಲಪತಿಯಾಗಿದ್ದನು. ದುಷ್ಯಂತನು ಮೃಗಯಾವಿಹಾರಿಯಾಗಿ ಆಶ್ರಮದ ಅತಿಥಿಯಾಗುವ ಕೆಲ ದಿನಗಳ ಹಿಂದಕ್ಕೆ ಕಣ್ವನು ಸೋಮತೀರ್ಥಕ್ಕೆ ತೆರಳಿದ್ದನು. ಮಗಳಾದ ಶಕುಂತಳೆಯ ಗ್ರಹಚಾರವು ಸ್ವಲ್ಪ ಪ್ರತಿಕೂಲವಿದ್ದುದರಿಂದ ಅದಕ್ಕೆ ವಿಶಿಷ್ಟ ಜಪತಪೋನುಷ್ಠಾನಗಳಿಂದ ಪರಿಹಾರ ಮಾಡಬೇಕೆಂಬುದೇ ಆತನು ಅಲ್ಲಿಗೆ ತೆರಳಿದುದರ ಸಂಕಲ್ಪವಾಗಿತ್ತು.

ಶಕುಂತಳೆಯು ಕಣ್ವನ ಸಾಕುಮಗಳು. ಆತನೊಮ್ಮೆ ಎಂದಿನಂತೆ ಸಮಿತ್ತುಗಳನ್ನು ಕೊಯ್ದು ಹಿಂದಕ್ಕೆ ಬರುತ್ತಿದ್ದಾಗ ಹಕ್ಕಿಗಳ ನಡುವೆ ಆಡುತ್ತಿದ್ದ ಸಣ್ಣ ಹೆಣ್ಣು ಶಿಶುವೊಂದನ್ನು ಕಂಡು, ಎತ್ತಿ ಮುದ್ದಿಟ್ಟು ತನ್ನದನ್ನಾಗಿ ಮಾಡಿಕೊಂಡನು. ತಾನು ಕಂಡಾಗ ಶಕುಂತಗಳೊಡನೆ ಆಡುತ್ತಿದ್ದುದರಿಂದ ಶಿಶುವನ್ನು ಶಕುಂತಳೆಯೆಂದು ಕರೆದನು. ಮೇನಕೆಯ ರೂಪಲಾವಣ್ಯಗಳಿಗೆ ಸೋತು, ಮುಗ್ಧನಾಗಿ, ತನ್ನ ತಪಸ್ಸನ್ನೇ ಅವಳ ದಾಂಪತ್ಯಕ್ಕಾಗಿ ತೆತ್ತು, ಅವಳಲ್ಲಿ ವಿಶ್ವಾಮಿತ್ರನು ಪಡೆದ ಶಿಶುವೇ ಶಕುಂತಳೆಯಾಗಿದ್ದಳು. ಮೇನಕೆಯು ದೇವಲೋಕದವಳು. ವಿಶ್ವಾಮಿತ್ರನ ತಪಸ್ಸನ್ನು ಕೆಡಿಸಲು ಇಂದ್ರನಾಜ್ಞೆಯಿಂದ ಭೂಮಿಗಿಳಿದು ಮುಗಿಲ ಮಧ್ಯದಲ್ಲಿ ಮಿಂಚಿ ಮಾಯವಾದ ಜ್ಯೋತಿಯು. ಮೇನಕೆಗೆ ಹೆಚ್ಚು ಹೊತ್ತು ಮರ್ತ್ಯಲೋಕದಲ್ಲಿರಲಾಗದು; ಅವಳು ಕೊನೆಯ ಸಲಕ್ಕೆ ಮಗುವಿಗೆ ಮುದ್ದಿಟ್ಟು ಅದನ್ನು ಋಷಿಯ ಕೈಗೆ ಒಪ್ಪಿಸಿ ತನ್ನ ಲೋಕಕ್ಕೆ ನಡೆದು ಬಿಟ್ಟಳು. ತಾಯಿಗೆ ಬೇಡದ ಮಗು ತಂದೆಗೆ ಬೇಕಾದೀತೇ? ವಿಶ್ವಾಮಿತ್ರನ ಮನಸ್ಸು ಕಲ್ಲಿನಂತಹುದು. ಬ್ರಹ್ಮತ್ವಕ್ಕಾಗಿ ಸಾಮ್ರಾಜ್ಯದ ವೈಭವಕ್ಕೆ ಹಿಂದೆ ತಿಲಾಂಜಲಿಯನ್ನಿತ್ತಿದ್ದನು. ಆತ್ಮಬಲದ ಸಾಕ್ಷಾತ್ಕಾರಕ್ಕಾಗಿ

ಸಂಸಾರಕ್ಕೆ ಮುಂಚೆ ಜಲಾಂಜಲಿಯನ್ನು ಕೊಟ್ಟಿದ್ದನು. ಒಮ್ಮೆ ಸಂಸಾರಕ್ಕೆ ಬೆನ್ನು ತೋರಿಸಿದಂತೆ ಇನ್ನೊಮ್ಮೆ ಮೋಹದ ಮಡದಿಯಲ್ಲಿ ಜನಿಸಿದ ಮನೋಹರವಾದ ಮಗುವಿಗೆ ಬೆನ್ನಿಕ್ಕಿ, ಕಾಡಿನ ಹಾದಿಯನ್ನು ಹಿಡಿದನು. ಮಗುವನ್ನು ಮೇನಕೆ ಕೊಟ್ಟಲ್ಲಿಯೇ ಇಟ್ಟು, ವನಾಂತರದ ಗಿರಿಬೆಟ್ಟಗಳ ಗುಹೆಗಳ ಕತ್ತಲಲ್ಲಿ ಮೂಗು ಹಿಡಿದು ತಪಸ್ಸನ್ನಾಚರಿಸಲು ನಡೆದು ಬಿಟ್ಟನು.

ತಾಯ್ತಂದೆಗಳಿಗೆ ಬೇಡವಾದ ಮಗುವು ವಿಶ್ವಕುಟುಂಬಿಯ ಕೈ ಸೇರಿತು. ವಿಶ್ವಕುಟುಂಬಿಯ ಆಶ್ರಮದಲ್ಲಿ ಗೌತಮಿಯ ಆರೈಕೆಯಿಂದ ಶಕುಂತಳೆ ಬೆಳೆದಳು. ಗೌತಮಿಯೆಂದರೆ ಬ್ರಹ್ಮವಾದಿನಿಯು; ಕಣ್ವನ ಭಗಿನಿಯು. ಶಕುಂತಳೆಯು ತನ್ನ ಸಖಿಯರೊಡನೆ ಕಣ್ವನಿಂದ ಓದುಬರೆಹವನ್ನು ಕಲಿತಳು. ಹಕ್ಕಿಗಳಿಂದ ಇಂಪಾಗಿ ಹಾಡಲಿಕ್ಕೆ ಕಲಿತಳು. ಹೆಣ್ಣು ಜಿಂಕೆಗಳ ಸಹವಾಸದಿಂದ ಓರೆ ನೋಟದ ಸೊಬಗನ್ನು ತನ್ನದನ್ನಾಗಿ ಮಾಡಿಕೊಂಡಳು. ಗಿಡಬಳ್ಳಿಗಳಿಂದ ಒಯ್ಯಾರದ ಬೆಡಗನ್ನೂ ವಿಲಾಸದ ಸಹಜತೆಯನ್ನೂ ತಿಳಿದುಕೊಂಡಳು. ಶಕುಂತಳೆಯು ಸಖಿಯರಿಂದೊಡಗೂಡಿ ತಂದೆಯಾದ ಕಣ್ವನಿಂದ ಮಾನವಹೃದಯವನ್ನು ತಿಳಿದುಕೊಂಡಿದ್ದರೆ, ಪಶುಪಕ್ಷಿವನಸ್ಪತಿಗಳಿಂದ ಮಾನವಹೃದಯದಲ್ಲಿ ಸಹಜವಾಗಿರದ ಪ್ರೇಮವನ್ನೂ ಮಾರ್ದವವನ್ನೂ ಕಲಿತುಕೊಂಡಳು. ಬೆಳೆದು ಯುವತಿಯಾದಾಗ ಅವಳನ್ನು ರೂಪಲಾವಣ್ಯದಲ್ಲಿಯೂ ಗುಣಶೀಲದಲ್ಲಿಯೂ ಮೀರುವವರಿದ್ದಿಲ್ಲ.

ಶಕುಂತಳೆಯ ಸೌಂದರ್ಯವು ನಿಷ್ಕಾರಣವಾಗಿಯೆ ಹೃದಯಂಗಮವಾಗಿತ್ತು. ಅವಳ ತಾಯಿ ಸುರಲೋಕದ ಸುಂದರಿ; ಅವಳ ತಂದೆ ಭೂಲೋಕದ ರಾಜರ್ಷಿ. ಸ್ವರ್ಗಮರ್ತ್ಯಗಳೆರಡರ ಸೌಂದರ್ಯವೆಲ್ಲವೂ ಅವಳಲ್ಲಿ ಹೊಂದಿಕೆಯಾಗಿದ್ದಿತು. ಅವಳ ತುಟಿ ತಳಿರಿಗೆ ಸಾಟಿ; ಅವಳ ನಳಿದೋಳ್ಗಳು ಮೆಲ್ಗೊಂಬೆಗಳಂತಿದ್ದುವು. ಅವಳ ದೇಹದಲ್ಲಿ ತೋರುವ ಯೌವನವು ಬಳ್ಳಿಯಲ್ಲಿ ತೋರುವ ಪುಷ್ಪದಂತೆ ಮನೋಹರವಾಗಿತ್ತು. ಆಶ್ರಮವಾಸಕ್ಕುಚಿತವಾದ ನಾರುಡೆಯನ್ನೆ ಉಟ್ಟಿದ್ದರೂ ಅವಳ ರೂಪ

ಲಾವಣ್ಯವು ಕುಂದಲಿಲ್ಲ; ಕಳೆಯೇರಿತ್ತು. ಯುವತಿಯರಿಗೆ ನಾರುಡೆಯು ಸಹಜವಲ್ಲ. ಆದರೆ ಸುಂದರಿಯಾದವರಿಗೆ ಯಾವುದು ತಾನೆ ಭೂಷಣವಲ್ಲ? ಸುತ್ತಲೂ ಬೆಳೆದ ಪಾಚಿಯು ತಾವರೆಯ ಕಾಂತಿಯನ್ನು ಹೆಚ್ಚಿಸುವುದಿಲ್ಲವೆ? ಚಂದ್ರನು ತನ್ನ ನಡುವಿನಲ್ಲಿದ್ದ ಕಪ್ಪು ಕಲೆಯಿಂದಲೂ ಕಾಂತತರನಾಗುವುದಿಲ್ಲವೆ? ಹಾಗೆಯೆ, ನಾರುಡೆಯನ್ನುಟ್ಟು, ಮುಗುಳ್ನನೆಗಳ ಬಳೆಗಳನ್ನು ತೊಟ್ಟು, ಹೂದಳಿರ ಗೊನೆಯನ್ನು ಮುಡಿಯಲ್ಲಿಟ್ಟು, ತನ್ನ ಸಖಿಯರೊಡನೆ ಬೆಳಗಿನ ಹನಿಮುಂಜಿನಂತಿದ್ದ ಪವಿತ್ರವಾದ ಪ್ರೇಮದಿಂದ ಇರುತ್ತಿದ್ದ ಶಕುಂತಳೆಯು ಕಣ್ವನಾಶ್ರಮಕ್ಕೆ ಮುಕುಟಪ್ರಾಯವಾಗಿದ್ದಳು.

ಅರಸನು ಇಂತಹ ಪವಿತ್ರವಾದ ಆಶ್ರಮದ್ವಾರವನ್ನು ಪ್ರವೇಶಿಸುವಾಗ ಆತನ ಬಲಗಣ್ಣು ಸ್ಫುರಿಸಿತು. ಇದಿರಿನಲ್ಲಿ ಹಕ್ಕಿಗಳು ಸಾಲಾಗಿ ಹಾರಿ, ಆತನನ್ನು ದಾಟಿದುವು. ಕೋಗಿಲೆಯು ಮಂಗಳವನ್ನು ಹಾಡಿತು. ನವಿಲು ನರ್ತನವನ್ನು ಮಾಡಿ ತನ್ನ ಸಹಚರಿಯನ್ನು ಸಮೀಪಕ್ಕೆ ಕರೆಯಿತು. ದೂರದಲ್ಲಿ ಕೃಷ್ಣಮೃಗವೊಂದು ಮರದ ನೆಳಲಲ್ಲಿ ವಿಶ್ರಮಿಸುತ್ತ, ತನ್ನ ಕೋಡಿನ ತುದಿಯಿಂದ ಹೆಣ್ಣು ಮೃಗದ ವಾಮನಯನವನ್ನು ತುರಿಸಿತು. ಇದನ್ನೆಲ್ಲ ಕಂಡು ಹರ್ಷವದನನಾಗಿ ಮುನ್ನಡೆಯುತ್ತಿದ್ದಾಗ, ಕಣ್ವಾಶ್ರಮದ ಹೂದೋಟವು ಅರಸನ ಕಣ್ಣಿಗೆ ರಮ್ಯವಾಗಿ ಕಂಡಿತು.

ಹೂದೋಟದಲ್ಲಿ ಹೆಂಗೆಳೆಯರು ಕೆಲವರು, ಸಲ್ಲಾಪವನ್ನು ಮಾಡುವುದು ಆತನಿಗೆ ಕೇಳಿಬಂತು. ಆತನು ಅವರ ಸಲ್ಲಾಪವನ್ನು ಕೇಳಿ, ಅವರ ವಿಲಾಸಗಳ ಸಂಭ್ರಮವನ್ನು ಕಂಡು, ಮನದಣಿಯೆ ಸಂತೋಷಪಡಬೇಕೆಂದು ಎಣಿಸಿದನು. ಅವರ ದರ್ಶನವು ಮಧುರವಾಗಿತ್ತು; ಮಾತು ಇಂಪಾಗಿತ್ತು. ಸೃಷ್ಟಿಯ ಪರಮಾವಧಿಯ ಮುಕುಟವು ಮಾನವರ ಚೆಲುವಾಗಿದೆ. ನಾವು, ಮರಗಿಡಗಳನ್ನೂ, ಬಳ್ಳಿಪೊದರುಗಳನ್ನೂ, ಸಂಧ್ಯಾಕಾಲದ ಚೆಲುವೆಯನ್ನೂ, ಹೊತ್ತಾರೆಯ ಹುರುಪನ್ನೂ ಕಂಡು ಆನಂದಪಡುವಂತೆ, ಕರು ತನ್ನ ತಾಯಿಯ ಮೊಲೆಯನ್ನು ಬಾಲವನ್ನೆತ್ತಿ ಕುಡಿಯುವುದನ್ನು ನೋಡಿ ನಲವೇರುವಂತೆ, ನಮ್ಮ ಸಮಾಜದ, ಮಾನವ ಸಮಾಜದ ಚೆಲುವಿನ ವಿಭೂತಿಗಳನ್ನು ಕಂಡು ನಯನಗಳನ್ನು ಸಫಲವನ್ನಾಗಿ ಮಾಡಬಾರ

ದೆಂದು ಯಾರೂ ಆತಂಕಿಸುವುದಿಲ್ಲ. ಸುಂದರವಾದ ಬಣ್ಣಗಳಿಂದೊಪ್ಪುವ ತುಂಬಿಯು ತನ್ನ ರೆಕ್ಕೆಗಳನ್ನು ಅಗಲಿಸಿ ಹಾರುವಂತೆಯೆ, ಸೃಷ್ಟಿಯ ತರುಣಿಯೊಬ್ಬಳು ಆಂತರಿಕ ಪವಿತ್ರತೆಯ ರೆಕ್ಕೆಯನ್ನು ಅಗಲಿಸಿ ತೇಲುವುದಾದರೆ, ಅಂತಹ ತೇಜೋರಾಶಿಯನ್ನು ಸೌಂದರ್ಯೋಪಾಸಕನಾಗಿ, ಹರಿಯುವ ತೊರೆಗಳನ್ನು ಕಂಡಂತೆ, ಮರವನ್ನು ಸುತ್ತುವರಿವ ಬಳ್ಳಿಯನ್ನು ನೋಡಿದಂತೆ, ತುಂಬಿದ ಚಂದ್ರನನ್ನು ದಿಟ್ಟಿಸಿದಂತೆ, ಹರಡುವ ಬೆಳ್ದಿಂಗಳಲ್ಲಿ ವಿಹರಿಸುವಂತೆ, ಇಂಪಾಗಿ ಹಾಡುವ ಕೋಗಿಲೆಯಿಂದ ಸೆಳೆಯಲ್ಪಟ್ಟಂತೆ,—ನೋಡಿ ಸಂತೋಷಿಸುವುದು ಸರಿಯಾಗಿದೆ.

ಅರಸನು ಸೌಂದರ್ಯೋಪಾಸಕನಾಗಿದ್ದನು. ಆತನು ಮರಗಳಿಗೆ ಅಡ್ಡಲಾಗಿ ನಿಂತು, ತರುಣಿಯರ ಸಲ್ಲಾಪವನ್ನು ಕೇಳನಿಂತನು. ಆ ತರುಣಿಯರು ತಪಸ್ವಿಕನ್ಯೆಗಳು; ಸರಳಸ್ವಭಾವದವರು; ನಿತ್ಯತೃಪ್ತರು. ಈ ಬಾಲಿಕೆಯರು ಮುಗ್ಧೆಯರು; ಸ್ನೇಹಸಲ್ಲಾಪಚತುರರು. ಕಣ್ವಾಶ್ರಮದ ಸ್ತ್ರೀಯರೆಲ್ಲ ಸ್ವಾತಂತ್ರ್ಯ ಸಂಪನ್ನರಾಗಿದ್ದರು; ನಂಬಿಕೆಗೆ ಪಾತ್ರರಾಗಿದ್ದರು; ಧಾರ್ಮಿಕರಾಗಿದ್ದರು. ತಪಸ್ವಿಕನ್ಯೆಗಳು ಮೂವರಿದ್ದರು. ಅವರಲ್ಲೊಬ್ಬಳು ಶಕುಂತಳೆಯು; ಉಳಿದವರು ಪ್ರಿಯಂವದೆ ಅನಸೂಯೆಯರು. ಅವರು ತಮ್ಮ ಕೈಗಳಲ್ಲಿ ಸೇಚನಘಟಗಳನ್ನು ಹಿಡಿದುಕೊಂಡು, ಸಮೀಪವೇ ಇದ್ದ ಕೊಳದಿಂದ ನೀರನ್ನೆತ್ತಿ ಮರಗಿಡಗಳಿಗೆ ಮತ್ತು ಬಳ್ಳಿಪೊದರುಗಳಿಗೆ ಅದನ್ನು ಎರೆಯುತ್ತಿದ್ದರು.

ಈ ಉದ್ಯಾನದ ಎಲ್ಲ ಗಿಡಬಳ್ಳಿಗಳನ್ನು ಶಕುಂತಳೆಯೆ ತನ್ನ ಸಖಿಯರೊಡಗೂಡಿ ಬೆಳೆಸಿದ್ದಳು. ಅವುಗಳ ಮೇಲೆ ಇವಳಿಗೆ ತುಂಬ ಪ್ರೇಮವಿದ್ದಿತು. ಹೂ ಬಿಟ್ಟ ಲತೆಯನ್ನು ಕಂಡೊಡನೆ ಇವಳ ಕಣ್ಣುಗಳೂ ಅರಳುತ್ತಿದ್ದುವು. ತಳಿರಿಟ್ಟ ಗಿಡವನ್ನು ನೋಡಿದೊಡನೆಯೆ ಇವಳ ಕೈಗಳೂ ಮುಂದಕ್ಕೆ ನೆಗೆಯುತ್ತಿದ್ದುವು. ಈ ಮರಗಿಡಗಳಲ್ಲಿ ಗೂಡುಗಳನ್ನು ಕಟ್ಟಿ, ಕಣ್ವಾಶ್ರಮದ ಶಾಂತಿಯ ಪುಣ್ಯವನ್ನು ಹೊಂದುವ ಹಕ್ಕಿಗಳ ಮೇಲೂ ಶಕುಂತಳೆಗೆ ತುಂಬ ಮಮತೆಯಿದ್ದಿತು. ಮರಗಳ ಪಾತೆಗಳಲ್ಲಿರುವ ನೀರನ್ನು ಕುಡಿಯಲೆಂದು ವಿಶ್ವಾಸದಿಂದ ಬಂದು, ಕುಪ್ಪಳಿಸಿ,

ಚೀರಿ, ಗುಟುಕೆತ್ತಿ, ಎಡಬಲಕ್ಕೆ ಕಣ್ಣಿಡುವ ಹಕ್ಕಿಗಳಂತೆಯೆ ಶಕುಂತಳೆಯೂ ಕುಪ್ಪಳಿಸಿ ಮೆಲ್ಲನೆ ಸನ್ನೆಯಿಂದಲೆ ತನ್ನ ಮನಃಸಂತೋಷವನ್ನು ಸಖಿಯರಿಗೆ ತಿಳಿಸುತ್ತಿದ್ದಳು. ತಾನು ಬರುವುದನ್ನು ಕಂಡು ಹಕ್ಕಿಗಳು ಭುರ್ರನೆ ಹಾರಿದೊಡನೆ, ಶಕುಂತಳೆಯು ತನ್ನ ಮುಖವನ್ನೆತ್ತಿ ಹುಬ್ಬುಗಳ ಮೇಲೆ ಜೋಲುಬಿದ್ದ ಮುಂಗುರುಳುಗಳನ್ನು ಎಡಗೈಯಿಂದ ಮೇಲಕ್ಕೆ ಸರಿಸಿ, 'ಹಕ್ಕಿಯೇ! ನಿನ್ನಂತೆ ಹಾಡಬಲ್ಲೆ; ಆದರೆ ನಿನ್ನಂತೆ ಹಾರಲಾರೆ. ಬಾ, ಬಾ! ನನಗೂ ಹಾರಲು ಕಲಿಸು. ಎಡಗೈಯ ಮಣಿಕಟ್ಟಿನಲ್ಲಿ ನಿಂತು, ನನ್ನೊಡನೆ ಓರಗೆ ಇಟ್ಟು ಹಾಡು ಮತ್ತು ಹಾರು. ನೀನು ರೆಕ್ಕೆಯನ್ನು ಅಗಲಿಸುವ ರೀತಿಯನ್ನು ಕಾಣುವೆನು. ನೀನು ರೆಕ್ಕೆಯನ್ನು ಬಡೆಯುವ ವಿಧಾನವನ್ನು ಕಾಣುವೆನು. ಬಾ! ಬಾ!' ಎಂದು ಬಾಲಿಶವಾಗಿ ಹೇಳುವ ಶಕುಂತಳೆಯ ಹೃದಯವು ಎಷ್ಟು ಕವಿತಾಕುಶಲವಾಗಿರಬೇಕು? ಎಷ್ಟು ಸುಂದರಮಯವಾಗಿರಬೇಕು?

ಅವರಿಂದು ಎಂದಿನಂತೆ ಕೊಡಗಳನ್ನು ಹಿಡಿದು ಆಶ್ರಮದಿಂದ ಹೂದೋಟಕ್ಕೆ ಹೊರಡುವಾಗ ದೂರದಲ್ಲಿ ಕೆಲವು ಹಕ್ಕಿಗಳು ಆಕಾಶದಲ್ಲಿ ಹಾರುತ್ತಿದ್ದುವು. ಅವುಗಳಲ್ಲೊಂದು ಮೇವಿಗಾಗಿ ಧರೆಗಿಳಿದುಬಿಟ್ಟಿತ್ತು. ಅದರ ಒಡನಾಡಿಯು ಅಂತೆಯೆ ಕೆಳಗಿಳಿಯುವುದರೊಳಗೆ ಅದಕ್ಕೆ ಪ್ರತಿಕೂಲವಾಗಿ ಗಾಳಿಯು ಬೀಸಿತು. ಅದು ಆ ಗಾಳಿಯ ಆಹತಿಗೆ ಸಿಕ್ಕಿ ಚೀರುವಾಗ ಶಕುಂತಳೆಯು ಬೆಚ್ಚಿ ಬಿದ್ದು, ಮೇಲೆ ನೋಡುತ್ತ, ತನ್ನ ಸಖಿಯರೊಡನೆ ಮುಂದಕ್ಕೆ ಓಡುತ್ತಿರುವಷ್ಟರಲ್ಲಿ ಆ ಹಕ್ಕಿ ಕೆಳಗಿಳಿದು, ತನ್ನ ಸಹಚರಿಯೊಡನೆ ಕುಪ್ಪಳಿಸಿ ಮೇಯುತ್ತಿತ್ತು. ಶಕುಂತಳೆಯು ಮತ್ತೆ ಸಖಿಯರೊಡನೆ ಏನೋ ಪಿಸುಗುಟ್ಟುವಾಗ ಹಕ್ಕಿಗಳು ಅಲ್ಲಿಂದ ಮಾಯವಾಗಿ ಬಿಟ್ಟವು. ಹಕ್ಕಿಗಳು ಅಲ್ಲಿಂದ ಮಾಯವಾದರೂ ಶಕುಂತಳೆಗಾನಂದವಾಯಿತು. ಈ ದೃಶ್ಯವನ್ನು ಮನಸ್ಸಿನ ಪಟದಲ್ಲಿ ಲೇಖಿಸಿ, ಸಖಿಯರು ಮತ್ತೆ ಮೆಲ್ಲನೆ ಅಲ್ಲಿಂದ ಕೊಳಕ್ಕೆ ನೀರಿಗಾಗಿ ಕೊಡಗಳನ್ನು ಹಿಡಿದು ನಡೆದರು.

ಕೊಳದ ತೀರದಲ್ಲಿ ನಿಂತು ಒಂದು ಹುಲ್ಲೆಮರಿಯು ನೀರನ್ನು ಕುಡಿಯುತ್ತಿತ್ತು. ಅದರ ಮೋರೆ ನೀರೊಳಗಿತ್ತು. ಅದರ ಕಣ್ಣುಗಳು ಹೆದರುತ್ತಿದ್ದುವು. ಅದರ ದೇಹವು ಬಾಯಾರಿ ಬಳಲುತ್ತಿತ್ತು. ಶಕುಂತಳೆಯು ಬೇಗನೇ ಧಾವಿಸಿ, ಅದರ ಬೆನ್ನಿನ ಮೇಲೆ ಕೈಯಾಡಿಸಿ, "ಅಹಾ! ಹರಿಣಶಿಶುವು ತುಂಬಾ ಬಳಲಿದೆ. ಪ್ರಿಯಂವದೆಯೆ! ಇಂದು ಹೊತ್ತಾರೆಯಿಂದ ನಾನೀ ಮರಿಯನ್ನು ಕಂಡಿಲ್ಲ. ಮುದ್ದು ಎಲ್ಲಿ ಮಾರ್ಗ ತಪ್ಪಿ ಬಳಲಿತೊ?" ಎಂದು ದುಃಖದಿಂದ ಹೇಳುವಾಗ ಅನಸೂಯಾಪ್ರಿಯಂವದೆಯರು, ಎಳದಳಿರು, ತೃಣದೂರ್ವಾಂಕುರಾದಿಗಳನ್ನು ಆಯ್ದಾಯ್ದು ಬಾಯೊಳಗೆ ಬೆರಳಿಟ್ಟು ಜಿಂಕೆಮರಿಗೆ ತಿನ್ನಿಸಿದರು. ಬಳಕುವ ಮರಿಯ ಮುಖವನ್ನೆತ್ತಿ ಮಾತನಾಡಿಸಿದರು. ಮರಿಯ ಮೆಯ್ಯ ಬಿಳಿಯ ಚಿತ್ರಗಳನ್ನು ತೊಯ್ದು ಶುಚಿಪಡಿಸಿದರು. ಮತ್ತು ಆಶ್ರಮದತ್ತ ತಿರುಗಾಡುತ್ತಿದ್ದ ಅದರ ತಾಯಿಯೆಡೆಗೆ ಕಳುಹಿಸಿಕೊಟ್ಟರು.

ಸಖಿಯರು ಹಾಡುತ್ತ ಕೊಳದಿಂದ ನೀರನ್ನು ತಂದು, ಮರಗಿಡಗಳ ಪಾತಿಗೆ ಅದನ್ನು ಎರೆದರು. ತಮ್ಮಷ್ಟೆ ಬೆಳೆದ ಗಿಡಗಳನ್ನು ಅಕ್ಕತಂಗಿಯರೆಂದು ಕರೆದರು. ತಮಗಿಂತ ಉದ್ದ ಬೆಳೆದ ಗಿಡಗಳನ್ನು 'ತಾಯೆ!' ಎಂದು ಸಂಬೋಧಿಸಿದರು. ಬೀಳಲುಗಳಿಂದ ತುಂಬಿದ ವೃಕ್ಷ ಮಹಾಶಯನನ್ನು ಕಂಡು 'ಅಜ್ಜ, ನಮಿಸುವೆವು,' ಎಂದು ಬಾಗಿದರು. ನಾಚಿಕೆಯ ಗಿಡವನ್ನು ನಾಚುವಂತೆ ಮಾಡಿ, 'ಗಿಡವೆ! ನಾವು ನಿನ್ನ ತಂಗಿಯರು, ಗಂಡಸರಲ್ಲ,' ಎಂದು ಉಪಹಾಸ ಮಾಡಿದರು. ಗುಲಾಬಿ ಗಿಡವು ತಮ್ಮ ಸೆರಗನ್ನು ಎಳೆದು ನಿಲ್ಲಿಸಿದೊಡನೆಯೆ 'ಗುಲಾಬಿ! ನಿನ್ನೊಡನೆ ಮಾತಾಡಲು ಮರೆತೆವು. ಸೆರಗು ಬಿಡು,' ಎಂದು ಅಂಗಲಾಚಿ ಸೆರಗನ್ನು ಹಿಂದಕ್ಕೆ ಎಳೆದರು.

ಆಡುತ್ತ ನೀರೆರೆಯುತ್ತಿದ್ದುದರಿಂದ ಅವರಿಗಾಯಾಸವಾಗಲಿಲ್ಲ. ಆದರೆ ಶಕುಂತಳೆಯು ಅವರಲ್ಲಿ ಸ್ವಲ್ಪ ಪೇಶಲಳು; ಮೈಕಟ್ಟು ಅಷ್ಟು ಬಿಗಿಯಾಗಿದ್ದಿಲ್ಲ. ಆದುದರಿಂದ ಅವಳು ಆಟದಲ್ಲಿ ಸೋತಳು. ಯಾರಿಂದ ಬೇಗನೇ ಹತ್ತು ಮರಗಳಿಗೆ ನೀರೆರೆದು ಮುಗಿಯುತ್ತದೆಂದು

ನೋಡುವ ಆಟದಲ್ಲಿ, ಪ್ರಿಯಂವದೆಯು ತನ್ನ ಹತ್ತೂ ಸಸಿಗಳಿಗೆ ನೀರೆರೆದು, ಶಕುಂತಳೆಯು ಇನ್ನೂ ನೀರೆರೆಯದೆ ಉಳಿದ ಎರಡು ಸಸಿಗಳಿಗೆ ತಾನೇ ನೀರು ಸುರಿದು, ಶಕುಂತಳೆಯನ್ನು ಸೋಲಿಸಿ ಬಿಟ್ಟಳು. ಪ್ರಿಯಂವದೆಯೆ ಗೆದ್ದಳೆಂದು ನ್ಯಾಯಾಧೀಶೆಯಾಗಿ ನಿಂತ ಅನಸೂಯೆಯ ತೀರ್ಮಾನವಾಯಿತು. 'ಅವಳು ಗೆದ್ದರೇನು? ನಾನು ಸೋತವಳಲ್ಲವೆ?' ಎಂದು ಶಕುಂತಳೆಯು ಓರೆಗಣ್ಣಿನಿಂದ ಪ್ರಿಯಂವದೆಯನ್ನು ಕಾಣುತ್ತ ಅನಸೂಯೆಗೆಂದಳು. 'ಆಗಲಿ, ಸೋತವರು ಗೆದ್ದವರಿಗೆ ಋಣಿಗಳು! ಗೆದ್ದವರು ಸೋತವರಿಗೆ ಧನಿಗಳೇನು?' ಎಂದು ನುಡಿದು, 'ಶಕುಂತಳೆ, ನಿನ್ನ ಬಲದಲ್ಲಿ ಬೀಜವೊಂದು ಮೊಳೆತಿದೆ! ಮೊಳಕೆಯು ಎಷ್ಟು ಧೈರ್ಯದಿಂದ ಮೇಲ್ಮೊಗವಾಗಿ ನಿಂತಿದೆ!' ಎಂದು ಪ್ರಸ್ತಾವವನ್ನೆ ಅನಸೂಯೆಯು ಬದಲಾಯಿಸಿದಳು. ಎಲ್ಲರ ಕಣ್ಣುಗಳೂ ಅದರೆಡೆಗೆ ಸುಳಿದುವು. ಇನ್ನು ನಾಲ್ಕು ದಿವಸಗಳಲ್ಲಿ ಅದು ಬಳ್ಳಿಯಾಗಿ ಹರಡಬಹುದೆಂಬ ನಿರೀಕ್ಷೆಯು ಹೊರಟಿತು; ಅದರಲ್ಲಿ ಸ್ವಲ್ಪ ಸಂಶಯವಾಯಿತು; ವಿಮರ್ಶೆಯಾಗಿ, ಇನ್ನೂ ಎಂಟು ದಿವಸಗಳು ಹೋದರೂ ಹೋಗಬಹುದೆಂದಾಯಿತು ಅಲ್ಲಿಂದ ಅವರು ಮತ್ತೆ ಮುನ್ನಡೆದರು.

ಅಷ್ಟರಲ್ಲಿ ಗಾಳಿ ಬೀಸಿತು. ಕೇಸರವೃಕ್ಷವೊಂದರ ಚಿಗುರುಗಳು ಗಾಳಿಯಲ್ಲಿ ಚಲಿಸುತ್ತಿದ್ದುವು. ಶಕುಂತಳೆಯಾಗ ಈ ವೃಕ್ಷವು ತನ್ನ ಬೆರಳುಗಳಿಂದ ತನ್ನನ್ನು ತ್ವರೆಗೊಳಿಸುತ್ತಿದೆಯೆಂದು ಅದನ್ನು ಆದರಿಸಲು ಅದರಡಿಗೆ ನಡೆದಳು. ಪ್ರಿಯಂವದೆಯು "ಎಲೆ ಶಕುಂತಳೆ! ಅಲ್ಲಿಯೇ ಮುಹೂರ್ತ ನಿಲ್ಲು. ನೀನಲ್ಲಿರುವುದರಿಂದ ಕೇಸರವೃಕ್ಷವು ಒಂದು ಲತೆಯಿಂದ ಕೂಡಿದಂತೆ ಶೋಭಿಸುತ್ತಿದೆ"ಯೆಂದು ಹೇಳಿದೊಡನೆಯೆ, ಶಕುಂತಳೆಗೆ ಪರಮಾನಂದವಾಯಿತು. ತನ್ನನ್ನು ಲತೆಗೆ ಹೋಲಿಸಿದುದಕ್ಕಾಗಿ ಆಕೆ ಬಹಳ ಮೆಚ್ಚಿದಳು. ಹೆಂಗಸರು ಸ್ವಭಾವದಿಂದಲೆ ಪ್ರಶಂಸೆಗೆ ಮೆಚ್ಚುತ್ತಾರೆ, ಎಂದ ಮೇಲೆ ಪ್ರಿಯಂವದೆಯಂತಹ ಮಾತುಬಲ್ಲ ಗೆಳತಿಯ ಪ್ರಶಂಸೆಯನ್ನು ಕೇಳಿ, ಯಾವಾಕೆ ಸಂತೋಷ ಪಡಲಿಕ್ಕಿಲ್ಲ? ಯಾವಾಕೆ ತನ್ನ ಸೆರಗನ್ನು ಎಳೆದು, ಲಜ್ಜೆಯಿಂದ ಒಂದು ಹಜ್ಜೆ ಮುಂದಿಟ್ಟು,

ಒಯ್ಯಾರದ ಬಿಜ್ಜೆಯಿಂದ 'ಕೇಸರವೃಕ್ಷವು ನಿಜವಾಗಿಯೂ ಚೆನ್ನಾಗಿ ಬೆಳೆದಿದೆ'ಯೆಂದು ಉತ್ತರವನ್ನು ಕೊಡಲಿಕ್ಕಿಲ್ಲ?

ಎದುರಿನಲ್ಲಿ ಒಂದು ಮಾವಿನ ಮರವಿದ್ದಿತು. ಅದಷ್ಟು ಬೆಳೆದ ಮರವಲ್ಲ; ಆದರೆ ಸಣ್ಣ ಗಿಡವೂ ಅಲ್ಲ. ಅಲ್ಲಿಯೆ ಸಮೀಪದಲ್ಲಿ ಒಂದು ಮಲ್ಲಿಗೆಯ ಬಳ್ಳಿಯೂ ಬೆಳೆದಿತ್ತು. ಶಕುಂತಳೆಯು ಆ ಬಳ್ಳಿಗೆ ವನ ಜ್ಯೋತ್ಸ್ನೆಯೆಂದು ಹೆಸರಿಟ್ಟು ಮಾವಿನಮರದ ಸ್ವಯಂವರವಧುವೆಂದು ಮಾಡಿ, ಆ ಬಳ್ಳಿಯು ಮರವನ್ನೇರುವಂತೆ ಸಾಧಿಸಿದ್ದಳು. ಈಗ ಮರ ವನ್ನೇರಿದ ಬಳ್ಳಿಯು ತನ್ನ ಪುಷ್ಪಗುಚ್ಛಗಳಿಂದ ಅಲ್ಲಲ್ಲಿ ಮರವನ್ನು ಮರೆ ಯಿಸಿತ್ತು. ಶಕುಂತಳೆಯು ಸಂತೋಷದಿಂದ ಈ ವಧೂವರರನ್ನು ಕಂಡು ಮನದಣಿಯೆ ಕೊಂಡಾಡಿದಳು; ಕಣ್ಣಾಣಿಯೆ ದಿಟ್ಟಿಸಿದಳು.

ಪ್ರಿಯಂವದೆಯು ಬಳ್ಳಿಯನ್ನು ದಿಟ್ಟಿಸುತ್ತಿದ್ದ ಶಕುಂತಳೆಯನ್ನು ಕಂಡು ಮನದಲ್ಲಿಯೆ ಸಂತಸಗೊಂಡಳು; ನಸುನಕ್ಕಳು. 'ಎಲೆ ಅನ ಸೂಯೇ! ಶಕುಂತಳೆ ಈ ವನಜ್ಯೋತ್ಸ್ನೆಯನ್ನು ಏಕೆ ಈ ತೆರ ನೋಡುವ ಳೆಂದು ಬಲ್ಲೆಯಾ?' ಎಂದು ವಕ್ರವಾಗಿ ಸಖಿಗೆ ಅವಳು ಕೇಳಿದಳು. ಸ್ವಾಭಾ ವಿಕವಾಗಿಯೆ ಸರಳೆಯಾದ ಅನಸೂಯೆ ತಾನರಿಯೆ ಎಂದೆಂದು ಬಿಟ್ಟಳು. ಆಗ ಪ್ರಿಯಂವದೆಯು, 'ಈ ವನಜ್ಯೋತ್ಸ್ನೆಯು ಅನುರೂಪವಾದ ವೃಕ್ಷ ವನ್ನು ಸೇರಿದಂತೆ, ತಾನೂ ತನಗೆ ತಕ್ಕ ವರನನ್ನು ಸೇರ ಬೇಕೆ'ಂದು ಯೋಚಿಸಿ ನಿಂತಿರುವಳೆಂದು ಹೇಳಿದೊಡನೆಯೆ, ಶಕುಂತಳೆಗೆ ಇಲ್ಲದ ಕೋಪವು ಬಂದಿತು. ತರುಣಿಯರು ಅನ್ಯರ ವಿವಾಹಸಂಬಂಧದ ವಿಷಯ ಉಪ ನ್ಯಾಸಗಳನ್ನು ಕೊಡಲು ಸಿದ್ಧರು. ಆದರೆ, ಪರಿಹಾಸಕ್ಕೇ ಆಗಲಿ, ಬೇರೆ ಯವರು ತಮ್ಮ ವಿವಾಹಾದಿಗಳ ವಿಷಯ ಮಾತಾಡುವುದೆಂದರೆ, ಅವ ರಿಗೆ ಅಸಹ್ಯವಾಗುವುದು; ಇಲ್ಲದ ಕೋಪವು ಉಂಟಾಗುವುದು. ಅವಳು ಕೋಪದಿಂದ ಕಿಡಿಯಾದಳು. ಆದರೆ ಆ ಕೋಪವು ದುಷ್ಟವಾದುದಲ್ಲ. ಕೋಪದಂತೆ ಕಂಡು ಬಂದರೂ, ಅದೊಂದು ತೆರದ ಅಸೂಯೆಯಾಗಿತ್ತು. ಶಕುಂತಳೆಯು ತನ್ನ ಮುಖವನ್ನು ಸ್ವಲ್ಪ ಅಲ್ಲಾಡಿಸಿ, ನಿಂತವಳು ಫಕ್ಕನೆ ಬದಿಗೆ ತಿರುಗಿ, 'ನಿಜ. ಇದು ನಿನ್ನದೇ ಮನಸ್ಸಿನ ಇಚ್ಛೆ'ಯೆಂದೆಂದು ನವ ಮಾಲಿಕೆಯ ಬಳ್ಳಿಗೆ ನೀರೆರೆದಳು.

ನವಮೂಲಿಕೆಯು ಪುಷ್ಪಿತಳಾಗಿದ್ದಳು. ಹೂಗಳು ಅರಳಿದ್ದುವು. ತುಂಬಿಯೊಂದು ಹೂವೊಂದರಲ್ಲಿ ಅಡಗಿ, ನೀರವವಾಗಿ ಜೇನಿನ ಸವಿಪಾನ ವನ್ನು ಮಾಡುತ್ತಿದ್ದಿತು. ನೀರೆರೆದುದರಿಂದ ಬಳ್ಳಿಯು ಬಳುಕಿ, ತಳಿರೆಲೆಗಳು ನಡುಗಿ, ಹೂ ಈಷತ್ ಕಂಪಿಸಿತು. ಒಳಗಿನ ತುಂಬಿಯು ಬೆದರಿತು; ಭೂಕಂಪವುಂಟಾಯಿತೆಂದು ಭ್ರಮಿಸಿರಬಹುದು. ಅದು ಹೂವಿಂದ ಹಾರಿ ಶಕುಂತಳೆಯ ಮುಖಕ್ಕೆ ಎರಗಿತು. ಆಕೆ ಬೆದರಿ, ತನ್ನ ಕೊಡವನ್ನು ಕೆಳಕ್ಕೆ ಚೆಲ್ಲಿಬಿಟ್ಟಳು. ಹೆದರಿದ ಆ ತುಂಬಿಯು ಅಲ್ಲಿಯೇ ಝೇಂಕರಿ ಸುತ್ತ ಸುಳಿಯುತ್ತಿತ್ತು. ಶಕುಂತಳೆಯು ಹೆದರಿ ನಡುಗುತ್ತಿದ್ದಳು. ಓರೆ ನೋಟದಿಂದ ಅದನ್ನು ನೋಡುತ್ತಿದ್ದಾಗ, ಆ ತುಂಬಿಯು ಶಕುಂತಳೆಯ ಕಣ್ಣು ಕಮಲವೆಂದು ಭ್ರಾಂತಿಗೊಂಡಿತೊ ಎಂಬಂತೆ ಅವಳ ನೇತ್ರ ವನ್ನು ಬಂದು ಚುಂಬಿಸಿತು. ಮತ್ತೆ ಹಿಂದಕ್ಕೆ ಹಾರಿ ತಿರಿಗೊಮ್ಮೆ ಅವಳ ಕಿವಿಯ ಸಮೀಪದಲ್ಲಿಯೆ ಗುಟ್ಟನ್ನು ಹೇಳಲಿಕ್ಕೆ ಬಂದಿತೋ ಎಂಬಂತೆ ಜಿನುಗಿತು; ಆಕೆ ಹೆದರಿ, ತನ್ನ ಎರಡೂ ಕೈಗಳನ್ನು ಕೊಡುತ್ತ ತುಂಬಿಯನ್ನು ನಿವಾರಿಸುತ್ತಿದ್ದಾಗ, ತುಂಬಿಯು ಬಂದು ಅವಳ ತುಟಿ ಯನ್ನು ಚುಂಬಿಸಿತು. ಶಕುಂತಳೆಯು ಅಧೀರೆಯಾಗಿ 'ಎಲೌ ಸಖಿ ಯರೆ! ಈ ದುರುದುಂಬಿಯಿಂದ ಬಾಧೆ ಪಡುವ ನನ್ನನ್ನು ರಕ್ಷಿಸಿರಿ, ರಕ್ಷಿಸಿರಿ' ಯೆಂದು ಮೊರೆಯಿಟ್ಟಳು. ಸಖಿಯರಾಗ ಕೇವಲವಾದೊಂದು ಭ್ರಮರದ ಬಾಧೆಯನ್ನು ತಡೆಯಲಾರದ ತಮ್ಮ ಸಖಿಯನ್ನು ಕಂಡು ಆಕೆ ಬಾಧೆಹೊಂದುವುದರಲ್ಲಿಯೂ ಒಂದು ತರದಲ್ಲಿ ಸಂತೋಷಪಟ್ಟು, ನಸು ನಗುತ್ತ, 'ನಿನ್ನನ್ನು ರಕ್ಷಿಸುವುದಕ್ಕೆ ನಾವೇನು ಗಂಡಸರೆ? ದುಷ್ಯಂತನಿಗೆ ಮೊರೆಯಿಡು. ಅವನಲ್ಲವೆ ರಕ್ಷಿಸುವವನು?' ಎಂದು ಸುಮ್ಮನೆ ನಿಂತು ಕೊಂಡರು. ಅಸಹಾಯಳಾದ ಶಕುಂತಳೆಯು ಸಖಿಯರ ಧೃಷ್ಟತನ ವನ್ನು ಕಂಡು, ಒಂದು ಹಜ್ಜೆ ಮುಂದಿಟ್ಟರೂ ತುಂಬಿ ಅವಳನ್ನೆ ಅನು ಸರಿಸುತ್ತಿತ್ತು. ಸಖಿಯರು ನಿಂತಲ್ಲಿಯೆ ನಿಂತು ಸಂತೋಷಪಡುತ್ತಿದ್ದರು.

ಮರಗಳ ಮರೆಯಲ್ಲಿ ನಿಂತ ಅರಸನು ಶಕುಂತಳೆಯ ಇಂಪಾದ ಮಾತುಗಳನ್ನು ಕೇಳಿ, ಸುಂದರವಾದ ಶರೀರವನ್ನು ಕಂಡು ಆಕೆಯಲ್ಲಿ

ಅನುರಾಗಪಟ್ಟಿದ್ದನು. ಆದರೆ, ಶಕುಂತಳೆಯು ಕಣ್ವನ ಮಗಳಾಗಿದ್ದಿದ್ದರೆ, ಆತನ ಅಭೀಷ್ಟವು ಸಿದ್ಧಿಸುವಂತಿದ್ದಿಲ್ಲ. ಕಾರಣ, ಕ್ಷತ್ರಿಯರು ಬ್ರಾಹ್ಮಣ ಕನ್ನಿಕೆಗಳನ್ನು ವಿವಾಹವಾಗುವುದು ಆ ಕಾಲದಲ್ಲಿ ಸ್ಮೃತಿ ವಿರೋಧ ವಾಗಿದ್ದಿತು. ಹಾಗಿದ್ದರೂ ಅವನ ಮನಸ್ಸು ಪದೇ ಪದೇ ಶಕುಂತಳೆಯನ್ನ ಬಯಸುತ್ತಿತ್ತು. ತುಂಬಿಯು ರಸಿಕನಂತೆ ಶಕುಂತಳೆಯ ಮುಖಕಮ ಲದ ಬಳಿಯಲ್ಲಿ ಸುಳಿದಾಡುವಾಗ, 'ತುಂಬಿಯೇ ಧನ್ಯವು! ನಾನು ತತ್ತ್ವಾನ್ವೇಷಿಯಾಗಿ ಹಿಂದುಳಿದೆನು,' ಎಂದು ಆತನು ಅಸೂಯೆಪಟ್ಟಿ ದ್ದನು. ಅಂತೂ ಮೃಗಬೇಟೆಗಾಗಿ ಬಂದ ದುಷ್ಯಂತ ಮಹಾರಾಜನು ಕಣ್ವಾ ಶ್ರಮಕ್ಕೆ ಬಂದು ಮದನನ ಬೇಟೆಗೆ ಸಿಕ್ಕಿ ಬಿಟ್ಟಿದ್ದನು. ಆಗ ತಾನೆ ಆತನಿಗೆ ತನ್ನನ್ನು ಪ್ರಕಾಶಗೊಳಿಸಿ, ಮುನಿಕನ್ಯೆಯರೊಡನೆ ಬೆರೆಯಲಿಕ್ಕೆ ಚೆನ್ನಿನಂತಹ ಸಂದರ್ಭವೊಂದು ಒದಗಿತು.

ತನ್ನ ಹೆಸರನ್ನು ಎತ್ತಿದೊಡನೆ ಮರೆಯಲ್ಲಿದ್ದ ಅರಸನಿಗೆ ತನ್ನನ್ನು ಕಾಣಿಸಿಕೊಳ್ಳಲಿಕ್ಕೆ ಸಂದರ್ಭವೊಂದು ಒದಗಿತು. 'ಪುರ ಕುಲದರಸು ದುರುಳರನ್ನು ಶಿಕ್ಷಿಸುವಾಗ ಮುಗ್ಧೆಯರಾದ ನಿಮ್ಮಲ್ಲಿ ಅವಿನಯವನ್ನು ಮಾಡುವವರು ಯಾರು?' ಎಂದೆ ಆತನು ಮುಂದಾದನು. ಮುನಿ ಕನ್ಯೆಯರಿಗೆ ಆಶ್ಚರ್ಯವಾಯಿತು. ಸ್ವಲ್ಪಮಟ್ಟಿಗೆ ಅವರು ಅವಾಕ್ಕಾದರು.

---

## ೩. ಪ್ರಥಮ ಸಂದರ್ಶನ



ಶಕುಂತಳೆಯು ಹೆದರಿ ಚಕಿತಳಾದಾಗ ದುಷ್ಯಂತ ಮಹಾರಾಜನು ಋಷಿಕನ್ಯೆಯರಿಗೆ 'ಹೆದರಬೇಡಿ'ರೆಂದು ಬಾಣಗಳನ್ನು ಜಗ್ಗಿ ಜಗ್ಗಿ ಕಠೋರವಾದ ತನ್ನ ಬೆರಳುಗಳ ಶಾಂತಿಮಯವಾದ ಅಂಗೈಯನ್ನು ತೋರಿಸಿದನು. ಇಂತಹ ಘಟನೆಯು ಆ ಋಷಿಕನ್ಯೆಯರಿಗೆ ಅಭೂತಪೂರ್ವವಾಗಿತ್ತು. ಆದರೆ, ಅವರು ಹೆದರಿ ಅಥವಾ ಲಜ್ಜೆಯಿಂದ, ಬಂದವನೊಡನೆ ಮಾತಾಡದಿರಲಿಲ್ಲ. ಏಕೆಂದರೆ, ಕುಲಪತಿಯು ಆಶ್ರಮವನ್ನು ಬಿಟ್ಟು ತೆರಳುವಾಗ, ಶಕುಂತಳೆಗೂ ಆಕೆಯ ಸಖಿಯರಿಗೂ ಅತಿಥಿಗಳನ್ನು ಚೆನ್ನಾಗಿ ಉಪಚರಿಸಬೇಕೆಂದು ಹೇಳಿಕೊಂಡು ಹೋಗಿದ್ದನು. ಅತಿಥಿಗಳಿಗೆ ಉಪಚಾರ ಮಾಡಿದಷ್ಟು ಸಾಕಾಗುವುದಿಲ್ಲ. ಬಳಲಿ ಬಂದವರು, ವಿಶೇಷ ಅಭಿಮಾನವಿಟ್ಟು ಬಂದವರು, ತೆರೆದ ಹೃದಯಸ್ಥಾನಕ್ಕೆ ಸ್ವೀಕರಿಸುವ ನೆಗೆದ ಕೈಯ ಸುಸ್ವಾಗತವನ್ನು ಬಯಸುವರು. ಮುಂದೆ ನೀಡಿದ ಹಸ್ತದ ಔದಾರ್ಯಕ್ಕೆ ಪರಮಾನ್ನ ಭೋಜನವೂ ಕೀಳಾಗಿದೆ. ಯಾವಾತನ ಸ್ವಾಗತವು ಅತಿಥಿಯ ಅಭಿಮಾನವಿದ್ದಷ್ಟು ಸ್ಪಷ್ಟವಾಗಿಲ್ಲವೊ ಆತನ ಸತ್ಕಾರವನ್ನು ಅತಿಥಿಯು ಸಂತೋಷದಿಂದ ಕೈಗೊಳ್ಳುವುದಿಲ್ಲ. ಹಿಂದೆ, ನಚಿಕೇತನೆಂಬ ವಿದ್ಯಾರ್ಥಿಯು ಯಮಧರ್ಮನ ಅತಿಥಿಯಾಗಿದ್ದನು. ಆದರೆ, ಯಮಧರ್ಮನು ಮನೆಯಲ್ಲಿಲ್ಲದೆ, ಹೊರಗೆ ತೆರಳಿದ್ದನು. ಅತಿಥಿಯು ಅನ್ನಾಹಾರಗಳಿಲ್ಲದೆ, ಮೂರು ದಿವಸ ಯಮಧರ್ಮನ ಹೊರಬಾಗಿಲಲ್ಲೆ ಉಳಿಯಬೇಕಾಯಿತು. ಕಡೆಗೆ ಅಶರೀರವಾಣಿಯೊಂದು ಈ ವಿಷಯದಲ್ಲಿ ಯಮಧರ್ಮನಿಗೆ ಎಚ್ಚರಕೊಟ್ಟೊಡನೆಯೆ, ಆತನು ಮನೆಗೆ ಧಾವಿಸಿ, ವಿನಯಭಕ್ತಿಗಳಿಂದ ಅತಿಥಿಯನ್ನು ಉಪಚರಿಸಲು, ನಚಿಕೇತನು ತನಗೆ ಆತ್ಮವಿದ್ಯೆಯನ್ನೂ ಸ್ವರ್ಗನರಕಗಳ

ಸ್ವರೂಪವನ್ನೂ ತಿಳಿಸಬೇಕೆಂದನು. ಅತಿಥಿಗೆ ಯಮಧರ್ಮನು ಹೆದರಿ, ಭಯದಿಂದ ರಹಸ್ಯವಾದುದನ್ನು ಬಯಲು ಮಾಡಬೇಕಾಯಿತು; ಆತ್ಮವಿದ್ಯೆಯೆಲ್ಲವನ್ನು ತಿಳಿಸಬೇಕಾಯಿತು. ಎಂಬ ಕಥೆಯಿದು ಪೂರ್ವಿಕರ ಅತಿಥಿಸತ್ಕಾರದ ವಿಷಯ ತುಂಬ ಹೇಳುತ್ತಿದೆ.

ಅನಸೂಯೆಯು ಬಂದ ಅತಿಥಿಯನ್ನು ಕಂಡು ತಮ್ಮ ಸಖಿಯು ಕೇವಲ ಭೃಂಗಕ್ಕೆ ಹೆದರಿದಳೆಂದು ಶಕುಂತಳೆಯನ್ನು ಬೆರಳಿಟ್ಟು ತೋರಿಸಿದಳು. ಅರಸನಾಗ ಶಕುಂತಳೆಯನ್ನು ದಿಟ್ಟಿಸಿ, 'ತಪಸ್ಸು ವರ್ಧಿಸುತ್ತಿದೆಯೆ?' ಎಂದು ಕೇಳಿದೊಡನೆ, ಶಕುಂತಳೆಯು ತಲೆ ಬಾಗಿಸಿ ಸುಮ್ಮನಿದ್ದಳು. ಗಂಡಸರ ಕಣ್ಣಿನಲ್ಲಿ ಕಠೋರತೆಯಿರಬೇಕು; ಇಲ್ಲದಿದ್ದರೆ, ಗಂಡಸರ ಕಣ್ಣನ್ನು ಕಂಡೊಡನೆ ಹೆಂಗಸರೇಕೆ ತಲೆ ಬಗ್ಗಿಸಬೇಕು?

ದುಷ್ಯಂತ ಮಹಾರಾಜನಿಗೆ ಸಖಿಯರು ಫಲಮೂಲಾದಿಗಳಿಂದ ಅರ್ಘ್ಯವನ್ನಿತ್ತರು. ಸುತ್ತಾಡಿ ಬಂದುದರಿಂದ ಆಯಾಸವಾಗಿರಬಹುದೆಂದು ಅಲ್ಲಿಯೇ ಬೆಳೆದಿದ್ದ ಸಪ್ತವರ್ಣವೃಕ್ಷದಡಿಯಲ್ಲಿದ್ದ ಜಗುಲಿಯ ಮೇಲೆ ಸುಖಾಸೀನನಾಗಲು ಸಖಿಯರು ಆತನಿಗೆ ಕೇಳಿಕೊಂಡರು. ಆತನು ಕುಳಿತೊಡನೆಯೆ ತಾವೂ ಒಂದು ಪಕ್ಕದಲ್ಲಿ ವಿಶ್ರಮಿಸಿದರು. ಅರಸನು ಆ ಕನ್ನಿಕೆಗಳ ಸ್ನೇಹವು ಸಮಾನವಾದ ಪ್ರಾಯದಿಂದಲೂ ರೂಪದಿಂದಲೂ ರಮಣೀಯವಾಗಿರುವುದೆಂದು ಹೊಗಳಿ, ಸಂಭಾಷಣೆಗೆ ಮೊದಲು ಮಾಡಿದನು. ಈತನು ಮಧುರವಾಗಿಯೂ ಚಮತ್ಕಾರವಾಗಿಯೂ ಮಾತನಾಡುವುದನ್ನು ಕಂಡು, ಸಖಿಯರಿಗೆ ಈತನಾರಿರಬಹುದೆಂಬ ಜಿಜ್ಞಾಸೆಯುಂಟಾಯಿತು. ಶಕುಂತಳೆಗಾದರೊ, ಆತನು ಯಾರೆಂದು ತಿಳಿಯಬೇಕೆಂಬ ಆಶೆಯಿತ್ತು. ಮಾತ್ರವಲ್ಲ, ಆಕೆಯ ಮನಸ್ಸು ತಪೋವನಕ್ಕೆ ವಿರೋಧವಾದ ವಿಕಾರಕ್ಕೆ ಒಳಗಾಗಿತ್ತು. ಅವಳೆದೆಯು ಉಬ್ಬಿತ್ತು; ಮುಖವೆತ್ತಿ ಅತಿಥಿಯನ್ನು ಕಣ್ಣಿಟ್ಟು ಕಾಣಲಾರದಾದಳು; ಸಖಿಯರೊಡನೆ ಸಂಭಾಷಣೆಯಲ್ಲಿ ಸೇರಲೂ ಅವಳಿಗೆ ಅಶಕ್ಯವಾಯಿತು. ಅನಸೂಯೆಯು ಸಹಜವಾದ ಚಪಲತೆಯಿಂದ ಅತಿಥಿಯ ಕುಲಗೋತ್ರಗಳನ್ನು ವಿಚಾರಿಸಿದಳು. ಅರಸನಾಗ ತನ್ನ ನಿಜಸ್ಥಿತಿಯನ್ನು ತಿಳಿಸಲು ಸಂಕೋಚಪಟ್ಟು, ತಾನೊಬ್ಬನು ಪುರು

ಕುಲದರಸನ ಧರ್ಮಾಧಿಕಾರಿಯೆಂದೂ ಆಶ್ರಮವಾಸಿಗಳ ಕ್ರಿಯೆಗಳು ನಿರ್ವಿಘ್ನವಾಗಿರುವುದರ ವಿಷಯ ನೋಡಲು ಬಂದವನೆಂದೂ ತಿಳಿಸಿ ದೊಡನೆಯೆ, ಶಕುಂತಳೆಯು ತನ್ನ ಸೆರಗನ್ನು ಎಳೆದು, ತಾನು ಕೂತ ರೀತಿಯನ್ನು ಬದಲಾಯಿಸಿ, ನಸುನಗುತ್ತ ಶೃಂಗಾರಲಜ್ಜೆಯನ್ನು ತೋರ್ಪ ಡಿಸಿದಳು.

ಶಕುಂತಳೆಯು ಮಾತನಾಡದೆ ಕುಳಿತಿರುವುದನ್ನು ಕಂಡು ಮತ್ತು ಆಕೆಯು ಲಜ್ಜಿತಳಾದುದನ್ನು ನೋಡಿ ಪ್ರಿಯಂವದೆಗೆ ಶಕುಂತಳೆಯಲ್ಲಿ ಸಂಶಯವೊಂದು ಹುಟ್ಟಿತು. ಅರಸನು ಮಾತನಾಡುತ್ತಿದ್ದಾಗ, ಆಕೆ ನುಡಿಯುತ್ತಿದ್ದಿಲ್ಲ. ಆತನು ತನ್ನ ದೃಷ್ಟಿಯನ್ನು ಈಕೆಯೆಡೆಗೆ ತಿರುಗಿಸಿ ದೊಡನೆಯೆ ಶಕುಂತಳೆಯು ತನ್ನ ಕಣ್ಣನ್ನು ಬೇರೆ ಕಡೆಗೆ ಹರಡಿಸುತ್ತಿದ್ದಳು. ಆದರೆ, ತಿರಿಗೊಮ್ಮೆ ಆತನ ದರ್ಶನವನ್ನು ಕದಿಯುತ್ತಿದ್ದಳು. ಇದನ್ನೆಲ್ಲ ಕಂಡು ಶಕುಂತಳೆಗೆ ಪರಿಹಾಸ ಮಾಡಬೇಕೆಂದು, ಅರಸನಿಗೆ ಕೇಳಿಸ ದಂತೆ 'ಸಖಿ, ಈಗ ಇಲ್ಲಿ ತಂದೆಯಾದ ಕಣ್ವರು ಇದ್ದಿದ್ದರೆ—' ಎಂದು ಗುಟ್ಟಿನಿಂದ ಹೇಳಿದೊಡನೆಯೆ, ಸರಳೆಯಾದರೂ ಶಕುಂತಳೆಯು ಕೋಪ ದಿಂದ 'ಇದ್ದರೇನಾಗುತಿತ್ತು?' ಎಂದು ಪ್ರಿಯಂವದೆಗೆ ಪ್ರಶ್ನಿಸಿದಳು. ಆಗ ಪ್ರಿಯಂವದೆಯು—'ತನ್ನ ಜೀವಿತ ಸರ್ವಸ್ವದಿಂದ ಈ ಅತಿಥಿಯನ್ನು ಕೃತಾರ್ಥನನ್ನಾಗಿ ಮಾಡುತ್ತಿದ್ದನು,' ಎಂದು ವಾಗ್ಬಾಣ ಬಿಟ್ಟೊಡನೆಯೆ, 'ಬಿಡಿ ಬಿಡಿ, ಮನಸ್ಸಿನಲ್ಲಿ ಏನೋ ಇಟ್ಟುಕೊಂಡು ಮಾತಾಡುತ್ತಿರುವಿರಿ. ನಿಮ್ಮ ಮಾತು ಕೇಳಲಾರೆ,' ಎಂದು ಶಕುಂತಳೆ ಸುಮ್ಮನಿದ್ದುಬಿಟ್ಟಳು. ಕಣ್ವನ ಜೀವಿತ ಸರ್ವಸ್ವವಾದ ಶಕುಂತಳೆಗೂ ಕೋಪವೆಂಬುದಿದ್ದಿತು.

ತನ್ನ ವಿಷಯವಾಗಿ ಸಖಿಯರು ಕೇಳಿಕೊಂಡಂತೆ ತಾನೂ ಸಖಿಯರ ವಿಷಯ ಕೇಳುವೆನೆಂದನು ಅರಸನು. ಸಖಿಯರು ಆತನಿಗೆ ಶಕುಂತಳೆಯ ಜನ್ಮವೃತ್ತಾಂತವನ್ನು ತಿಳಿಸಿದರು. ಆತನು ಅದನ್ನು ಬಹಳ ಕುತೂಹಲ ದಿಂದಲೂ ಗೌರವದಿಂದಲೂ ಶ್ರವಣ ಮಾಡಿದನು. ಶಂಕುತಳೆಯು ಭೂಮಿತಲದತ್ತಣಿಂದ ಹೊರಟ ಜ್ಯೋತಿಯಲ್ಲವೆಂದೂ ಆಕಾಶದೊಳು ದಿಸಿದ ಮಿಂಚೆಂದೂ ತಿಳಿದು ತನ್ನ ಮನೋರಥವು ಸಿದ್ಧಿಸಿತೆಂದು ಹಿಗ್ಗಿದನು.

ಎಕ್ಕೆಯ ಗಿಡದಲ್ಲಿ ಮೇಲಿಂದ ಉರುಳಿ ಬಿದ್ದದ್ದು ಮಲ್ಲಿಗೆ ಹೂವೆಂದು ಆತನು ನೆನೆಸಿದನು. ಆದರೆ, ಸಖಿಗಳ ಮುಖದಿಂದ ಇನ್ನೊಂದು ವಿಷಯ ವನ್ನು ಆತನು ತಿಳಿದುಕೊಂಡನು. 'ನಿಮ್ಮ ಸಖಿಯು ತಪೋವನ ನಿವಾಸ ವನ್ನು ಮದುವೆಯನಕ ಮಾತ್ರ ಕೈಗೊಳ್ಳುವವಳೊ, ಅಥವಾ ಯಾವ ಜ್ಜೀವವೂ ತನ್ನಂತೆ ವಿಶಾಲ ನಯನಗಳುಳ್ಳ ಹೆಣ್ಣು ಜಿಂಕೆಗಳೊಡನೆ ಅಂತಹ ವ್ರತವನ್ನು ಸಾಧಿಸುವವಳೊ? ಇದನ್ನು ನಾನು ತಿಳಿಯಲಿಚ್ಛಿಸು ವೆನು,' ಎಂದು ಅರಸನು ಮತ್ತೆ ಕೇಳಿದನು.

ಪ್ರಿಯಂವದೆಯು 'ಆರ್ಯನೆ! ಈಕೆ ಪರಾಧೀನೆ. ಈಕೆಯ ತಂದೆಗೆ ಈಕೆಯನ್ನು ತಕ್ಕ ವರನಿಗೆ ಕೊಡಬೇಕೆಂಬ ಸಂಕಲ್ಪವಿದೆ' ಎಂದು ಹೇಳಿಬಿಟ್ಟಳು. ಅರಸನ ಸಂದೇಹವೆಲ್ಲ ಮಾಯವಾಯಿತು. ಆತನ ಅಭಿ ಲಾಷೆಯು ಕೈಗೂಡಿದಂತಾಯಿತು. ಕೆಂಡವಾಗಿರಬಹುದೆಂದು ಊಹಿಸಿ ದುದು ಮಾಣಿಕ್ಯವೆಂದಾಯಿತು.

ಅರಸನು ಮೇಲಿಂದ ಮೇಲೆ ಶಕುಂತಳೆಯ ವಿಷಯವಾಗಿಯೇ ಪ್ರಸ್ತಾವವೆತ್ತುವುದನ್ನು ಕಂಡು ಆಕೆಗೆ ಲಜ್ಜೆಯಾಗಿದ್ದಿತು. ಮತ್ತು ತನ್ನ ಚೇಷ್ಟಾ ವಿಕಾರಗಳನ್ನು ಬಿಗಿಯಾಗಿ ಹಿಡಿಯಲೂ ಆಕೆಗೆ ಅಶಕ್ಯವಾಗಿದ್ದಿತು. ತಾನಿಲ್ಲಿರುವುದು ತನ್ನ ಶಾಲೀನತೆಗೆ ಕುಂದೆಂದು ಆಕೆ ಎಣಿಸಿದಳು. ಆಗ ತಾನೆ ಅವಳಿಗೊಂದು ನೆವಸಿಕ್ಕಿತು. ಪರಪುರುಷರೆದುರಿಗೆ ತನ್ನ ವಿವಾಹ ವಿಷಯವಾಗಿ ಪ್ರಿಯಂವದೆ ಮಾತಾಡುವುದನ್ನು ಆಕೆ ಅಸಂಬದ್ಧವೆಂದು ತಿಳಿ ದಳು. ಕೋಪಗೊಂಡವಳಂತೆ ನಟಿಸಿ, ಪ್ರಿಯಂವದೆಯ ಮೇಲೆ ಹುಸಿ ಕೋಪದಿಂದ ಅನಸೂಯೆಯನ್ನು ಕುರಿತು, 'ಅನಸೂಯೆ! ನಾನು ಹೋಗು ವೆನು. ಅಸಂಬದ್ಧವಾಗಿ ಪ್ರಿಯಂವದೆ ಮಾತಾಡುತ್ತಿರುವಳು. ಅವಳ ನಡತೆಯನ್ನು ಆರ್ಯೆಯಾದ ಗೌತಮಿಗೆ ತಿಳಿಸುತ್ತೇನೆ'ಂದು ಶಕುಂತಳೆಯು ಎದ್ದು ನಿಂತಳು. ಅನಸೂಯೆಯಾಗ ತನ್ನ ಸಖಿಗೆ ಅತಿಥಿವಿಶೇಷನನ್ನು ಬಿಟ್ಟು ಹೋಗುವುದು ಶಿಷ್ಟಸಂಪ್ರದಾಯವಲ್ಲವೆಂದು ಸೂಚಿಸಿದರೂ ಶಕುಂತ ಳೆಯು ಯಾವುದನ್ನೂ ಆಡದೆ ನಡೆದುಬಿಟ್ಟಳು.

ಸಿಟ್ಟುಗೊಂಡ ಸಖಿಯನ್ನು ಅಷ್ಟೇ ಸಿಟ್ಟುಗೊಂಡ ಪ್ರಿಯಂವದೆ ತಡೆದು ಬಿಟ್ಟಳು. ಇಲ್ಲದಿದ್ದರೆ, ಮಕ್ಕಳಂತೆ ದೂರು ಹೇಳುವುದೆಂದ ರೇನು? 'ಸಖಿ! ಇದು ನಿನಗುಚಿತವಲ್ಲ!' ಎಂದು ಹುಬ್ಬನ್ನು ಗಂಟಿಕ್ಕಿ ಹೆದರಿಸಿ ಬಿಟ್ಟಳು ಪ್ರಿಯಂವದೆ.

'ಏತಕ್ಕೆ ಹೋಗಬಾರದು!' ಎಂದು ಶಕುಂತಳೆ ಹಿಂದಕ್ಕೆ ತಿರುಗಿ ದಳು.

'ಸಸಿಗಳಿಗೆ ಎರಡು ಸಾರಿ ನೀರೆರೆಯುವ ಸಾಲ ಹೊತ್ತಿರುವೆ. ಬಾ! ತೀರಿಸಿಕೊಂಡು ಹೋಗುವೆ,' ಎಂದು ಬಲಾತ್ಕಾರದಿಂದ ಶಕುಂತಳೆ ಯನ್ನು ಪ್ರಿಯಂವದೆ ಎಳೆದುಬಿಟ್ಟಳು.

ನಡೆದ ಶಕುಂತಳೆ ತಡೆಯಲ್ಪಟ್ಟು ನಿಂತಳು. ನಿಂತವಳೆ, ಪ್ರಿಯಂ ವದೆಯ ಕೈಯಲ್ಲಿ ಕೈದಿಯಾದಳು. ಪ್ರಿಯಂವದೆಯು ಪ್ರಿಯವಾದು ದನ್ನು ಮಾತ್ರ ಆಡುವುದಿಲ್ಲ; ಅಪ್ರಿಯವಾದುದನ್ನೂ ಮಾಡಲಾಪಳು. ಪ್ರಿಯವೋ ಅಪ್ರಿಯವೋ ಅದವಳಿಗೇ ಗೊತ್ತು. ಇರಲಿ. ಶಕುಂತಳೆಯು ಹಿಂತಿರಿಗಿದುದು ಅತಿಥಿಯನ್ನು ಇನ್ನೊಮ್ಮೆ ಕಾಣಬಹುದೆಂದು. ಆದರೆ, ಇಚ್ಛೆಯು ಪ್ರಾಪ್ತವಾದರೂ, ಸಂದರ್ಭವು ಅಗ್ರಾಹ್ಯವಾಗಿತ್ತು. ಗೆದ್ದ ಪ್ರಿಯಂವದೆಯ ಎದುರು ಸೋತು ಹೋದ ಶಕುಂತಳೆಯ ಮುಗ್ಧ ಸ್ವಭಾ ವದ ಮೂರ್ತಿಯು ಚಿತ್ರಗತವಾದಂತೆ ಬಿಮ್ಮನೆ ನಿಂತಿತ್ತು. ಅರಸನಿಗೆ ಕನಿಕರವುಂಟಾಗಿ, ಮಾತಿನ ಸೆರೆಗೆ ಒಳಗಾದ ತನ್ನ ಪ್ರಿಯೆಯನ್ನು ಬಿಡಿ ಸಲು ಆತನು ಇಚ್ಛಿಸಿದನು. 'ಅಮ್ಮಾ ಪ್ರಿಯಂವದೆಯೆ! ಸಖಿಯಲ್ಲಿ ಕರುಣೆ ದೋರು. ನೀರೆರೆದು ಆಯಾಸಪಟ್ಟಿರುವಳು. ಅವಳ ಕೈಯೆಲ್ಲ ಪಾತ್ರೆ ಹಿಡಿದು ಕೆಂಪಾಗಿದೆ; ಎದೆಯಿಂದ ಇನ್ನೂ ನಿಡುಸುಯ್ಯು ಹೊರಡುತಿದೆ. ಕೂದಲು ಜೋಲುಬಿದ್ದಿದೆ. ಬೆವರು ಹನಿಯುತ್ತದೆ. ಈಕೆ ಆಶ್ರಮಕ್ಕೆ ಹೋಗಿ ವಿಶ್ರಮಿಸಲಿ. ನಾನು ಈಕೆಯ ಸಾಲವನ್ನು ತೀರಿಸುವೆನು,' ಎಂದು ತನ್ನ ಬೆರಳಲ್ಲಿ ಶೋಭಿಸುತ್ತಿದ್ದ ಉಂಗುರವನ್ನು ತೆಗೆದು ಪ್ರಿಯಂವದೆಗೆ ಕೊಡಲಿಚ್ಛಿಸಿದನು. ಆ ಉಂಗುರದಲ್ಲಿ 'ದುಷ್ಯಂತ ಮಹಾರಾಜ' ಎಂದಿದ್ದ ಏಳಕ್ಷರಗಳ ಪ್ರಭಾಪಂಕ್ತಿಯನ್ನು ಕಂಡು ಎಲ್ಲರೂ ಬೆರಗಾದರು. ಅರ

ಸನು ಈ ಸಂಗತಿಯನ್ನು ಅಡಗಿಸಲಿಕ್ಕೆ ಪ್ರಯತ್ನಿಸಿದನು. ಆದರೆ, ಮನುಷ್ಯರನ್ನು ಬೇಗನೆ ಅಳೆಯಬಲ್ಲ ಪ್ರಿಯಂವದೆಗೆ ಅತಿಥಿಯ ಸ್ವರೂಪವು ತಿಳಿದಂತಾಯಿತು. ಆಕೆಯು ಸಖಿಯನ್ನು ಕಂಡು,–'ಸಖಿ! ಕರುಣಾಳುವಾದ ಆರ್ಯನಿಂದ ಅಥವಾ ಮಹಾರಾಜನಿಂದ ಬಿಡುಗಡೆಯಾದೆ; ಆರ್ಯನ ಮಾತಿನಿಂದಲೇ ಋಣಮುಕ್ತೆಯಾದೆ, ಹೋಗು,' ಎಂದೆಂದು ಅರಸನ ಅಂಗುಲೀಯವನ್ನೂ ಸ್ವೀಕರಿಸಲಿಲ್ಲ; ಶಕುಂತಳೆಯನ್ನು ತಡೆದೂ ನಿಲ್ಲಿಸಲಿಲ್ಲ.

ಈ ಮೇಲಿನ ದೃಶ್ಯವು ಶ್ರೇಷ್ಠವಾದ ಕವಿತೆಯೆಂದು ಹೇಳಬಹುದು. ಸಖಿಯರ ಇಚ್ಛೆಗೆ ವಿರುದ್ಧವಾಗಿ, ಅತಿಥಿಯ ಮನೋಭಿಲಾಷೆಗೆ ಪ್ರತಿಕೂಲವಾಗಿ, ಸಖಿಯರ ಮಾತನ್ನು ಅಲ್ಲಗಳೆದು ಹೋಗಿಬಿಟ್ಟ ಶಕುಂತಳೆಯು ಪ್ರಿಯಂವದೆಯ ಮಾತಿಗೆ ಸೆರೆಯಾಳಾದಳು. ಏನು ಮಾಡಬೇಕೆಂದು ತೋಚದ ಸರಳೆಯು ಇಕ್ಕಟ್ಟಿನ ಪ್ರಸಂಗದಲ್ಲಿ ಸಿಲುಕಿದಾಗ, ವಸ್ತುವಿನೊಡನೆ ಸೌಂದರ್ಯ ಸೇರಿದಾಗ ಆನಂದವು ಪರಿಣಾಮವಾಗುವಂತೆ, ದುಷ್ಯಂತನಿಗೆ ಕನಿಕರದೊಡನೆ ನಸುನಗುವಂತಾಯಿತು. ಈ ಪುಟ್ಟ ಪ್ರಸಂಗದಲ್ಲಿ ಪ್ರಿಯಂವದೆಯು ಮಾಡಿದ ಸತ್ವಪರೀಕ್ಷೆಯಲ್ಲಿ ಅರಸನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾದನು. ಆತನು ಸಖಿಯರ ಮೆಚ್ಚುಗೆಯನ್ನು ಪಡೆದನು. ಮತ್ತೆ ಪ್ರಿಯಂವದೆಯು ಶಕುಂತಳೆಗೆ ಇನ್ನು ತೆರಳಬಹುದೆಂದು ಸೂಚಿಸಿದರೂ ಶಕುಂತಳೆಯು ಅಲ್ಲಿಂದ ಕದಲಲಿಲ್ಲ. 'ನನ್ನನ್ನು ತಡೆಯುವುದಕ್ಕೂ ಬಿಡುವುದಕ್ಕೂ ನೀನಾವಳು?' ಎಂದು ಪರುಷವಾಗಿಯೇ ಅವಳು ಮಾತಾಡಿದಳು. ಕೈದಿಯು ಜೈಲು ತೆರೆದರೂ, ಹೊರಹೋಗಲು ಇಚ್ಛಿಸಳು. ಕಾರಣ, ಬಂಧನವು ನಿಜವಾದ ಮಾವನ ಮನೆಯಾಗಿತ್ತು.

ಋಷಿಮುನಿಸಿನ ಶಕುಂತಳೆಗೆ ತನ್ನ ಪ್ರಿಯನಿಂದ ಅಗಲುವ ಇಷ್ಟವಿದ್ದಿಲ್ಲ. ಆದರೆ ಆಶ್ರಮದಲ್ಲಿ ಕೋಲಾಹಲವೆದ್ದಿತು. ದುಷ್ಯಂತ ಮಹಾರಾಜನು ಕಾಣುವುದಿಲ್ಲವೆಂದು ಆತನನ್ನು ಹುಡುಕುತ್ತ ಒಂದ ಸೈನಿಕರು ತಪೋವನದನಕ ನಡೆದಿದ್ದರು. ಸೈನಿಕರ ರಥಗಳನ್ನು ಕಂಡು ಹೆದರಿದ ಆನೆ

ಯೊಂದು ಹಿಂಡಿನಿಂದ ತಪ್ಪಿ ಧರ್ಮಾರಣ್ಯವನ್ನು ಹೊಕ್ಕಿತು. ಅದು ವೇಗವಾಗಿ ಓಡುತ್ತಿದ್ದಾಗ ಮರಗಳು ಅದರೊಡನೆ ಸಂಘರ್ಷವಾಗಿ ಉರುಳಿದುವು. ಬಳ್ಳಿಗಳ ಸಂಕುಲವು ತನ್ನ ಕಾಲುಗಳನ್ನು ಬಂಧಿಸಿದರೂ ಮರವೊಂದಕ್ಕೆ ತನ್ನ ದಾಡೆಯು ಬಡಿದು ತುಂಡಾದರೂ ಅದು ಹುಲ್ಲೆಗಳ ಗುಂಪನ್ನು ಭೇದಿಸಿ ತಪೋವನಕ್ಕೆ ವಿಘ್ನವನ್ನು ತಂದೊಡ್ಡುವಂತೆ ವರ್ತಿಸಿತು. ಸೈನಿಕರ ಕುದುರೆಗಳ ಖುರಗಳಿಂದೆದ್ದ ಧೂಳು ಬಿಸಿಲಿಗೆ ಒಣಗುವ ಒದ್ದೆ ವಲ್ಕಲವನ್ನು ದೂಷಿಸಿತು. ತಪೋವನವಾಸಿಗಳೆಲ್ಲರೂ ಹೆದರಿ, ತಪೋವನದ ಪ್ರಾಣಿಗಳ ರಕ್ಷಣೆಗೋಸ್ಕರ ಸನ್ನದ್ಧರಾದರು. ಮುನಿಕನ್ಯೆಗಳು ಅರಸನಿಂದ ಪರ್ಣಶಾಲೆಗೆ ಹೋಗಲು ಅನುಮತಿಯನ್ನು ಕೇಳಿಕೊಂಡರು. ಅರಸನು ತಾನು ಆಶ್ರಮಕ್ಕೆ ಬಾಧೆಯುಂಟಾಗದಂತೆ ಪ್ರಯತ್ನಿಸುವೆನೆಂದನು. ಶಕುಂತಳೆಯಿಂದೊಡಗೂಡಿದ ಸಖಿಯರು ಆಶ್ರಮದತ್ತ ನಡೆದರು. ಏಕಾಕಿಯಾದ ದುಷ್ಯಂತನು ವನದತ್ತ ತಿರುಗಿದನು. ಆದರೆ ಶಕುಂತಳೆ ಅರಸನಲ್ಲಿ ಮೋಹಗೊಂಡಿದ್ದಳು. ತನ್ನ ಪ್ರಿಯನನ್ನಗಲಿ ಪರ್ಣಶಾಲೆಗೆ ಹೋಗುವುದು ಆಕೆಗೆ ಸಾಧ್ಯವಾಗಿದ್ದಿಲ್ಲ. ಭೂಕಂಪದ ನಡುಕ, ಜಲಪ್ರಳಯದ ಆಕ್ರಮಣ, ಮಳೆಗಾಳಿಚಳಿಗಳ ಇರವು—ಇವೊಂದೂ ಪ್ರೇಮವನ್ನು ಕದಲಿಸಲಾರವು. ಸೂಜಿಯಂತಿರುವ ದರ್ಭೆಯು ತನ್ನ ಕಾಲಿಗೆ ಚುಚ್ಚಿತೆಂದು ತಡೆದು ಕುಡಿನೋಟವನ್ನು ಹಿಂದಕ್ಕೆ ತಿರುಗಿಸಿ ಪ್ರಿಯನನ್ನೊಮ್ಮೆಗೆ ಶಕುಂತಳೆ ಕಂಡಳು; ಗೋರಂಟೆಯ ಮರದ ಕೊನೆಗೆ ತನ್ನ ನಾರುಡೆ ಸಿಕ್ಕಿಲ್ಲದಿದ್ದರೂ ಅದನ್ನು ಬಿಡಿಸಿಕೊಳ್ಳುವ ನೆವದಿಂದ ನಿಂತು ತನ್ನನ್ನೆ ಹಿಂದಕ್ಕೆ ನೋಡುವ ಅತಿಥಿಯನ್ನು ನೋಡಿ ಲಜ್ಜಿತಳಾದಳು. ಹಾಗೆಯೇ ಅರಸನ ದೇಹವು ವನದತ್ತ ಹೋಗುತ್ತಿದ್ದರೂ ಆತನ ಮನಸ್ಸು ಆಶ್ರಮದತ್ತ ಹರಿಯುತ್ತಿತ್ತು. ಅಂತೂ ಶೂನ್ಯ ಹೃದಯನಾದ ಅರಸನು ಸೈನಿಕರೆಡೆಗೆ ತೆರಳಿದನು; ಶೂನ್ಯ ಹೃದಯಳಾದ ಶಕುಂತಳೆಯು ಪರ್ಣಶಾಲೆಯತ್ತ ನಡೆದಳು.

# ೪. ಕಣ್ವಾಶ್ರಮದ ಅತಿಥಿ



ದುಷ್ಯಂತನು ತನ್ನ ಸೈನಿಕರೆಲ್ಲರನ್ನು ಕಂಡನು. ಅವರು ಸುತ್ತಾಡಿ ಬಹಳ ಬಳಲಿದ್ದರು. ಹಗಲೆನ್ನದೆ ಬಿಸಿಲೆನ್ನದೆ ಅಡವಿಗಳಲ್ಲಿ ಸುತ್ತಾಡಿ ಅವರಿಗೆ ಸಾಕಾಗಿದ್ದಿತು. ಹೊತ್ತಿಗೆ ಸರಿಯಾಗಿ ಹೊಟ್ಟೆಗಿಲ್ಲದೆ, ಬೆಟ್ಟದ ಜೋಗಿನ ನೀರನ್ನು ಕುಡಿದು, ಸುಟ್ಟ ಮಾಂಸವನ್ನು ಅವರು ತಿನ್ನಬೇಕಾಗಿದ್ದಿತು. ಅವರಿಗೆಲ್ಲ ಬೇಟೆಯಲ್ಲಿ ಉತ್ಸಾಹವು ತಗ್ಗಿತ್ತು. ಆದರೆ, ಅರಸನ ಮನಸ್ಸಿಗೆ ವಿರೋಧವಾಗಬಹುದೆಂದು ಯಾರೂ ಉಸಿರೆತ್ತುವಂತಿದ್ದಿಲ್ಲ. ಸ್ವತಃ ಕ್ಲಾಂತರಾದರೂ ಅವರು ಬೇಟೆಯ ಸಹಸ್ರ ಗುಣಗಳನ್ನು ಅರಸನ ಮುಂದೆ ಹಾಡುತ್ತಿದ್ದರು. ಬೇಟೆಯಿಂದ ಮೇದಸ್ಸು ಜೀರ್ಣವಾಗಿ, ಹೊಟ್ಟೆಯು ಕೃಶವಾಗಿ, ದೇಹವು ಉತ್ಸಾಹಭರಿತವಾಗುವುದೆಂದೊಬ್ಬನು ಅಭಿಪ್ರಾಯಪಟ್ಟನು. ಬೇಟೆಯ ಸಮಯದಲ್ಲಿ ಮೃಗಗಳ ಭಯಕ್ರೋಧಗಳ ಪ್ರವೃತ್ತಿಯನ್ನು ಚೆನ್ನಾಗಿ ಪರಿಶೀಲಿಸಬಹುದೆಂದು ಇನ್ನೊಬ್ಬನು ಮಾತೆತ್ತಿದನು. ಬೇಟೆಯಲ್ಲಿ ಸ್ಥಿರವಲ್ಲದ ಗುರಿಗೆ ಹೊಡೆಯಬೇಕಾದುದರಿಂದ ಧನ್ವಿಗಳಿಗದೊಂದು ಹೆಚ್ಚಳಿಕೆಯೆಂದು ಮಗುದೊಬ್ಬನೆಂದನು. ಬೇಟೆಯೆಂಬುದು ವ್ಯಸನವಲ್ಲವೆಂದೂ ಅದೊಂದು ವಿನೋದವೆಂದೂ ಇನ್ನೊಬ್ಬನು ಹೇಳಿಮುಗಿಸಿದನು. ಆದರೆ, ಅರಸನ ಪರಮಮಿತ್ರನಾದ ಮಾಢವ್ಯನೆಂಬ ಬ್ರಾಹ್ಮಣ ವಟುವು ಮಾತ್ರ ದುಷ್ಟ ಮೃಗಗಳಲ್ಲಿ ಹೆಚ್ಚಿನವು ಕೊಲ್ಲಲ್ಪಟ್ಟದುದರಿಂದ, ಬೇಟೆಯನ್ನು ಮುಗಿಸಿ ರಾಜಧಾನಿಗೆ ಹಿಂತೆರಳುವುದುತ್ತಮವೆಂದನು. ಹಾಗೆಯೇ ಅರಸನಿಗೂ ಬೇಟೆಯಲ್ಲಿ ಉತ್ಸಾಹವಿದ್ದಿಲ್ಲ. ಆಶ್ರಮದ ಬಳಿ ಕ್ರೂರ ಮೃಗಗಳಿದ್ದಿಲ್ಲ. ಅಲ್ಲಿದ್ದ ಜಿಂಕೆಗಳನ್ನು ಬೇಟೆಯಾಡುವುದೆಂದರೆ, ಅವುಗಳ ಕಣ್ಣುಗಳು ಶಕುಂತಳೆಯ ಕಣ್ಣುಗಳಂತೆ ವಿಶಾಲವಾಗಿದ್ದುದರಿಂದ ಬಾಣಗಳನ್ನು ಬಿಡಲು ಆತನಿಗೆ ಕೈ ಬರು

ತ್ತಿದ್ದಿಲ್ಲ. ಆದುದರಿಂದ, 'ಕಾಡುಕೋಣಗಳು ನೀರಿನಾಶ್ರಯದಲ್ಲಿ ಮುಳು ಗುತ್ತಿರಲಿ; ಮೃಗಗಳು ಮರಗಳಡಿಯಲ್ಲಿ ಮೆಲುಕಾಡುತ್ತಿರಲಿ; ಹಂದಿಗಳು ಮುಸ್ತೆಯನ್ನು ಕಿತ್ತು ನೆಮ್ಮದಿಯಿಂದ ಪಲ್ವಲಗಳಲ್ಲಿ ಬಿಪ್ಪಿಕೊಳ್ಳಲಿ; ನನ್ನೀ ಚಾಪದ ಹೆದೆಯು ಶಿಥಿಲವಾಗಿ ವಿಶ್ರಾಂತಿ ಹೊಂದಲಿ,' ಎಂದು ತನ್ನ ಸೇನಾಪತಿಗೆ ಅರಸನು ಆಜ್ಞಾಪಿಸಿದನು. ಸೇನಾಪತಿಗೂ ಸೈನಿಕರಿಗೂ ಇದನ್ನು ಕೇಳಿ ಮಹದಾನಂದವಾಗಿರಬೇಕು. ಅರಸನಪ್ಪಣೆಯಂತೆ ಸೇನಾ ಪತಿಯು ತನ್ನ ಸೈನಿಕರೆಲ್ಲರಿಗೂ ತಪೋವನದ ಸಮೀಪಕ್ಕೆ ಬಾರದಂತೆ ಆಜ್ಞೆಯಿತ್ತನು.

ಅರಸನೇನೊ ಬೇಟೆಯನ್ನು ನಿಲ್ಲಿಸಿದ್ದನು. ಜಿಂಕೆಗಳನ್ನು ಕಂಡೊಡ ನೆಯೆ ಅವನಿಗೆ ಶಕುಂತಳೆಯ ನೆನಪಾಗುತ್ತಿತ್ತು. ಶಕುಂತಳೆಯು ಇವು ಗಳ ಸಹವಾಸದಿಂದ ಕುಡಿನೋಟದ ಸೊಬಗನ್ನು ಕಲಿತಿದ್ದಳೊ, ಶಕುಂ ತಳೆಯಿಂದ ಈ ಹರಿಣಶಿಶುಗಳು ದೃಷ್ಟಿಕ್ಷೇಪದ ಪಾಠವನ್ನು ಕಲಿತವೊ ಎಂಬುದು ಸ್ವಲ್ಪ ಸಂಶಯವಾಗಿತ್ತು. ಶಕುಂತಳೆಯೆಂದರೆ, ವಿಶ್ವಾ ಮಿತ್ರನಿಗೆ ಮಗಳಾಗಿ ಹುಟ್ಟಿ, ಕಣ್ವನಾಶ್ರಮದಲ್ಲಿ ಕನ್ನಿಕೆಯಾಗಿ ಬೆಳೆದು, ಅಲ್ಲೇ ಬೆಳೆದಿದ್ದ ಎಕ್ಕೆಯ ಗಿಡದ ಮೇಲೆ ಉರುಳಿದ್ದ ದುಂಡು ಮಲ್ಲಿ ಗೆಯ ಹೂವಿನಂತೆ ಇರುವವಳು. ಎಕ್ಕೆ ಹೂ ಮತ್ತು ದುಂಡುಮಲ್ಲಿ ಗೆಯ ಹೂ ಬಣ್ಣದಲ್ಲಿಯೂ ಆಕೃತಿಯಲ್ಲಿಯೂ ಸಮಾನ. ಆದರೆ, ಎಕ್ಕೆ ಹೂವಿಗೆ ಪರಿಮಳವಿಲ್ಲ. ಹಾಗಿದ್ದರೂ, ಎಕ್ಕೆಯ ಹೂಗಳೊಡನೆ ಈ ದುಂಡುಮಲ್ಲಿಗೆಯ ಹೂ ದೈವವಶಾತ್ ಸೇರಿತ್ತು. ಈ ಶಕುಂತ ಳೆಯ ಸೃಷ್ಟಿಯೆಂಬುದು ಹೊಸ ಮಾದರಿಯಾಗಿತ್ತು. ಬ್ರಹ್ಮನು ಸೌಂದರ್ಯಸಾರಗಳನ್ನೆಲ್ಲ ಒಟ್ಟುಗೂಡಿಸಿ, ಚಿತ್ರದಲ್ಲಿ ಅವುಗಳನ್ನೆಲ್ಲ ಲಿಖಿಸಿ, ಅನಂತರ ಪ್ರಾಣವನ್ನು ಆ ಚಿತ್ರದಲ್ಲಿ ಹೊಯ್ದಿರಬಹುದು; ಅಥವಾ ಮನಸ್ಸಿನಿಂದಲೇ ಆಕೆಯನ್ನು ಸೃಷ್ಟಿಸಿರಲೂ ಬಹುದು. ಬ್ರಹ್ಮನ ಜಾಣತನವನ್ನೂ ಆಕೆಯ ಒಡಲನ್ನೂ ನೋಡಿದರೆ, ಇದೊಂದು ಹೊಸ ತರದ ಸ್ತ್ರೀರತ್ನ ಸೃಷ್ಟಿಯೆಂದು ತೋರುತ್ತಿದ್ದಿತು. ಇಂತಹ ರೂಪವತಿಯು ಚಿವುಟದ ಚಿಗುರೆಲೆಯಂತೆ, ಮೂಸದಿದ್ದ ಪುಷ್ಪದಂತೆ, ಸವಿನೋಡದ ಮಧುವಿನಂತೆ, ಅಖಂಡವಾದ ಪುಣ್ಯಗಳ ಮೊತ್ತದಂತೆ, ರೂಪದಲ್ಲಿ

ಅನಘಳಾಗಿದ್ದಳು. ಇಂತಹವಳು ಇಂಗುದೀತೈಲದ ಲೇಪನದಿಂದ ಜಿಡ್ಡು ಬೆಳೆದ ತಲೆಯುಳ್ಳ ಯಾವ ದರಿದ್ರ ಬ್ರಾಹ್ಮಣನ ಕೈಗೆ ಬೀಳುವಳೊ ಎಂದು ಆತನ ಮನಸ್ಸಿನ ಹೆದರಿಕೆಯಾಗಿತ್ತು.

ಆದರೆ, ಆಕೆಯು ತನ್ನಲ್ಲಿ ಅನುರಕ್ತಳಾಗಿರುವಳೆಂದು ಆಕೆಯ ಕಟಾಕ್ಷಾನುರಾಗದಿಂದಲೆ ದುಷ್ಯಂತನು ತಿಳಿದಿದ್ದನು. ಸ್ವಾಭಾವಿಕವಾಗಿ ಕಾಡುಹುಡುಗಿಯರು ಚದುರೆಯರಲ್ಲ; ಆದರೂ ತಾನಿದುರು ಬಂದು 'ತಪಸ್ಸು ವರ್ಧಿಸುತ್ತಿದೆಯೆ?' ಎಂದೊಡನೆ ಆಕೆ ತನ್ನ ಮೋರೆಯನ್ನು ತಿರುಗಿಸಿದ್ದಳು. ನಗು ಬಂದರೂ, ಬೇರೆಯೇ ನಿಮಿತ್ತವನ್ನು ಸೂಚಿಸಿದ್ದಳು. ಶಿಷ್ಟಾಚಾರದ ಕಾರಣವಾಗಿ ಆಕೆಯ ಪ್ರೇಮವು ಸಂಪೂರ್ಣವಾಗಿ ನಿವೃತ್ತವಾದುದೂ ಇಲ್ಲ; ಯೌವನದ ಕಾರಣದಿಂದ ಸಂವೃತವಾದುದೂ ಇಲ್ಲ. ಆದುದರಿಂದ ಆಶ್ರಮದಲ್ಲಿ ಕೆಲದಿವಸಗಳು ನಿಂತು, ಕಣ್ವನು ಹಿಂತಿರುಗಿದ ತರುವಾಯ ಆತನೊಡನೆ ಈ ವಿಷಯ ಪ್ರಸ್ತಾವವೆತ್ತಿ ನೋಡೋಣವೆಂದು ದುಷ್ಯಂತನು ಯೋಚಿಸಿದನು. ಪಿಂಡಖರ್ಜೂರದಲ್ಲಿ ಬೇಸರಪಟ್ಟು, ಹುಣಿಸೆಹಣ್ಣನ್ನು ತಿನ್ನಲು ಬಯಸಿದವನಂತೆ ನಾಡಿನ ರಾಣಿವಾಸದ ಸುಖವನ್ನು ತಿರಸ್ಕರಿಸಿ ಮುನಿಪುತ್ರಿಯನ್ನು ಈತನು ಇಚ್ಛಿಸಿದನು.

ಅರಸನಿಗೆ ಆಶ್ರಮವನ್ನು ಬಿಟ್ಟುಹೋಗುವ ಮನಸ್ಸಾಗಲಿಲ್ಲ. ಆಶ್ರಮದಲ್ಲಿ ಕೆಲದಿವಸವಿದ್ದು ಬಳಿಕ ಹೋಗುವುದೆಂದು ಆತನು ಆಲೋಚಿಸಿದನು. ಆದರೆ ಮಹಾರಾಜನಾದವನು ಯಾವ ಕಾರಣವೂ ಇಲ್ಲದೆ ವನಾಂತರದಲ್ಲಿ ನಿಲ್ಲುವುದು ತಾನೆ ಹೇಗೆ? ಪೌರವರು ವೃದ್ಧಾಪ್ಯದಲ್ಲಿ ರಾಜ್ಯವನ್ನು ಮಕ್ಕಳಿಗರ್ಪಿಸಿ ವಾನಪ್ರಸ್ಥಕ್ಕೆ ಕಾಡಿಗೆ ತೆರಳುವುದಿತ್ತು. ಆದರೆ ಯುವಕನಾದ ತಾನು ಕಾಡಿನಲ್ಲಿ ನಿಂತರೆ ಯಾರು ಏನೆಂದಾರು? ಋಷಿಗಳಿಂದ ಕಂದಾಯವನ್ನು ಒಟ್ಟುಗೂಡಿಸುವುದಿದೆ ಎಂಬುದನ್ನೆ ನೆವವಾಗಿಟ್ಟು ಶಕುಂತಳೆಗಾಗಿ ನಿಂತವನಲ್ಲವೆಂದು ತೋರಿಸಬಹುದೆಂದು ಮಾಢವ್ಯನು ಸೂಚಿಸಿದನು. ಆದರೆ, ಋಷಿಗಳು ತಮ್ಮ ತಪಸ್ಸಿನ ಆರನೆಯೊಂದಂಶವನ್ನು ಅರಸನಿಗೆ ಕೊಡುವವರು; ಅವರಿಂದ ತಿರಿಗೊಮ್ಮೆ ಕಂದಾಯವೆತ್ತುವುದು ಹೇಗೆ? ರಾಜನು ಉಪಾಯ ಕಾಣದಾದನು.

ಅಷ್ಟರಲ್ಲಿ ದುಷ್ಯಂತ ಮಹಾರಾಜನು ಕಾಡಿನ ಬಳಿ ಬೇಟೆಯಾಡುತ್ತ ಬಂದುದನ್ನು ತಿಳಿದು ಅವನನ್ನು ಹುಡುಕಿ ಋಷಿಗಳೆಲ್ಲರೂ ಆತನೊಡನೆ ಹೀಗೆಂದು ವಿಜ್ಞಾಪಿಸಿಕೊಂಡರು.—'ಎಲೈ ಮಹಾರಾಜನೆ! ಕಣ್ವ ಮಹರ್ಷಿಯು ಆಶ್ರಮದಲ್ಲಿಲ್ಲದ ಕಾರಣ, ರಾಕ್ಷಸರು ನಮ್ಮ ಯಜ್ಞ ಯಾಗಗಳಿಗೆ ವಿಘ್ನವನ್ನುಂಟು ಮಾಡುವರು. ಅದುಕಾರಣ, ನೀನು ಆಶ್ರಮ ದಲ್ಲಿ ನಿಂತು ಉಪಕಾರ ಮಾಡಬೇಕು.' ಅರಸನಿಗಿದು ವಿಜ್ಞಾಪನೆಗಿಂತ ಅನುಗ್ರಹವೆಂದು ತೋರಿತು. ತನಗೆಲ್ಲವೂ ಅನುಕೂಲವಾಗಿ ಕೂಡಿ ಬಂದು ದಕ್ಕೆ ಬಹಳ ಸಂತೋಷಪಟ್ಟನು. ಕೂಡಲೆ, ಧನುರ್ಬಾಣಗಳನ್ನೂ ಸಜ್ಜಾದ ರಥವನ್ನೂ ತರಲು ಸಾರಥಿಗೆ ಆಜ್ಞಾಪಿಸಿದನು. ಋಷಿಗಳು ತಮ್ಮ ವಿಜ್ಞಾಪನೆಯನ್ನು ಅರಸನು ಮನ್ನಿಸಿದನೆಂದು ಹರ್ಷಿತರಾದರು.

ಆಶ್ರಮಕ್ಕೆ ತೆರಳಲು ರಥವು ಸನ್ನದ್ಧವಾಯಿತು. ಆಗ ತಾನೆ ರಾಜಧಾನಿಯಿಂದ ಕರಭಕನೆಂಬವನು ದುಷ್ಯಂತನ ತಾಯಿಯ ಸಂದೇಶ ದೊಡನೆ ಅಲ್ಲಿಗೆ ಬಂದು ಮುಟ್ಟಿದ್ದನು. ತಾನು ಪುತ್ರಪಿಂಡಪಾಲನ ವೆಂಬ ಉಪವಾಸವ್ರತವನ್ನು ಕೈಗೊಂಡಿರುವೆನೆಂದೂ ಅದರ ಪಾರಣೆಯ ದಿವಸ ದುಷ್ಯಂತನು ಬಳಿಸೇರಬೇಕೆಂದೂ ಆಕೆಯು ಕರೆಕಳುಹಿಸಿದ್ದಳು. ಅರಸನಿಗೆ ಒಂದುಕಡೆ ಹಿರಿಯರಾಜ್ಞೆ; ಇನ್ನೊಂದುಕಡೆ ತಪಸ್ವಿಗಳ ಕಾರ್ಯ. ತ್ರಿಶಂಕುವಿನಂತೆ ಅಂತರಾಳದಲ್ಲಿ ನಿಲ್ಲುವ ಗತಿ ಬಂದೊದಗಿತು. ಹೊಳೆಯು ಹರಿಯುವಾಗ ಎದುರಿನಲ್ಲಿ ಬೆಟ್ಟವು ನಿಂತರೆ, ಪ್ರವಾಹವು ಹೇಗೆ ಇಬ್ಭಾಗವಾಗಿ ಹರಿಯುವುದೋ, ಹಾಗೆಯೇ ಅವನ ಮನಸ್ಸು ಎರಡು ವಿಧವಾಯಿತು. ಕಡೆಗೆ ಅರಣ್ಯದಲ್ಲಿ ನಿಂತು ತಪಸ್ವಿಜನಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದೇ ಉಚಿತವೆಂದು ಶಕುಂತಳೆಯಲ್ಲಿ ನಟ್ಟ ಮನಸ್ಸುಳ್ಳ ಮಹಾರಾಜನು ನಿಶ್ಚಯಿಸಿದನು; ತನ್ನ ಮಿತ್ರನಾದ ಮಾಢವ್ಯನನ್ನು ಪ್ರತಿನಿಧಿಯಾಗಿ ಮಾಡಿ ರಾಜಧಾನಿಗೆ ವ್ರತದ ನಿಮಿತ್ತವಾಗಿ ಕಳುಹಿಸುವುದೆಂದೇ ಕಾಡಿನ ತಾವರೆಗೆ ಸೋತು ಮರುಳಾದ ತುಂಬಿಯು ನಿಶ್ಚಯಿಸಿತ್ತು. ಮಾಢವ್ಯನು ಸಮಸ್ತ ಸೇನಾಸಹಿತನಾಗಿ ಯುವರಾಜ ನಂತೆ ಮೆರೆಯುತ್ತ ರಾಜಧಾನಿಗೆ ತೆರಳಿದನು.

ಆದರೆ ಅರಸನು, ಹೊರಟ ಮಾಢವ್ಯನನ್ನು ತಡೆದನು. 'ಸಖನೆ, ನಾನೆಂದುದೆಲ್ಲವೂ ಪರಿಹಾಸಕ್ಕೆ. ಶಕುಂತಳೆಯ ವಿಷಯವಾಗಿ ಮಾತಾಡಿ ದುದೆಲ್ಲವೂ ಪರಮಾರ್ಥವೆಂದು ನಂಬಿ, ಇಲ್ಲದುದನ್ನು ಕಲ್ಪಿಸಿ ರಾಜಧಾನಿ ಯಲ್ಲಿ ವಾರ್ತೆ ಹಬ್ಬಿಸಬೇಡ. ಋಷಿಗೌರವದಿಂದ ನಾನಿಲ್ಲಿ ನಿಲ್ಲುವೆನೆ ಹೊರತು, ಶಕುಂತಳೆಯಲ್ಲಿ ನನಗೆ ಎಳ್ಳಷ್ಟೂ ಗೌರವವಿಲ್ಲ. ಅವಳೆಲ್ಲಿ? ನಾನೆಲ್ಲಿ? ತಿಳಿಯಿತೆ?' ಎಂದು ಪಿಸುಗುಟ್ಟಿದನು.

ಯುವರಾಜನಂತೆ ಮೆರೆದು ರಾಜಧಾನಿಗೆ ಹೋಗಲಿದ್ದ ಬ್ರಾಹ್ಮಣ ವಟು ಮಾಢವ್ಯನು ನಕ್ಕನು. 'ಗೆಳೆಯಾ, ನಾನೇನು ಹಾಗೆ ಗಾವಿಲನಲ್ಲ; ಮನುಷ್ಯರ ತಾರತಮ್ಯ ನನಗೆ ಗೊತ್ತು,' ಎಂದು ರಾಜಧಾನಿಯತ್ತ ಆತನು ನಡೆದನು. ಸೈನಿಕರ ಕೋಲಾಹಲವಿಲ್ಲದೆ ಕಣ್ವಾಶ್ರಮದಲ್ಲಿ ಹಿರಿಗೊಮ್ಮೆ ಶಾಂತಿಯು ನೆಲೆಗೊಂಡಿತು.

---

## ೩. ಪ್ರಥಮ ಸಮಾಗಮ

---



ತಪಸ್ವಿಗಳ ಯಾಗರಕ್ಷಣಕ್ಕಾಗಿ ದುಷ್ಯಂತಮಹಾರಾಜನು ಕಣ್ವಾಶ್ರಮದಲ್ಲಿ ಅನೇಕ ದಿವಸಗಳನ್ನು ಕಳೆದನು. ಆಶ್ರಮದಲ್ಲಿ ಕಣ್ವನಿಲ್ಲವೆಂದು ಧೈರ್ಯಗೊಂಡು ವೈಖಾನಸರ ಯಜ್ಞಯಾಗಾದಿಗಳಿಗೆ ವಿಘ್ನವನ್ನು ತಂದೊಡ್ಡುವ ರಾಕ್ಷಸರನ್ನೆಲ್ಲ ತನ್ನ ಧನುಷ್ಟಂಕಾರದಿಂದಲೇ ಹೆದರಿಸಿ ಆತನು ಓಡಿಸಿಬಿಟ್ಟನು. ಆತನ ಬಾಣಸಂಧಾನದ ಚಾತುರ್ಯವೇನು? ಮುನಿಪುತ್ರರೂ ಮುನಿಕನ್ಯೆಗಳೂ ದುಷ್ಯಂತ ಮಹಾರಾಜನ ಈ ಅಸಾಧಾರಣವಾದ ಶಕ್ತಿಪ್ರದರ್ಶನವನ್ನು ಕಂಡು ಆತನನ್ನು ಶ್ಲಾಘಿಸಿದರು. ಕಡೆಗೊಂದು ದಿವಸ ಆತನು ವೈಖಾನಸರೆಲ್ಲರಿಂದ ಅನುಜ್ಞೆಯನ್ನು ಪಡೆದು ಇನ್ನು ರಾಜಧಾನಿಗೆ ತೆರಳುವುದೆಂದು ನಿಶ್ಚಯಿಸಿದನು.

ಆದರೆ, ಆತನಿಗೆ ಮುನಿಕನ್ಯೆಯಾದ ಶಕುಂತಳೆಯಲ್ಲಿ ಮೋಹವುಂಟಾಗಿತ್ತು. ಅವಳ ನಡೆನುಡಿಗಳೂ ಗುಣಶೀಲಗಳೂ ರೂಪಲಾವಣ್ಯಗಳೂ ಆತನ ಮನಸ್ಸನ್ನು ಸೆಳೆದುಕೊಂಡಿದ್ದುವು. ಕಾಡಿನಲ್ಲಿ ಬೆಳೆದ ಈ ಹುಡುಗಿಯಲ್ಲಿ ಅರಸನು ಮೋಹಿತನಾಗಲಿಕ್ಕಿಲ್ಲವೆಂದು ಬ್ರಾಹ್ಮಣ ವಟು ಮಾಢವ್ಯನು ಎಣಿಸಿದ್ದನು. ಅರಸನು ತನ್ನೊಡನೆ ಶಕುಂತಳೆಯ ವಿಷಯವೆಂದುದೆಲ್ಲವೂ ಪರಿಹಾಸವೆಂದೇ ಆತನು ನಂಬಿದ್ದನು. ಆದುದರಿಂದ ಆತನು ರಾಜಧಾನಿಗೆ ತೆರಳಿ, ನಾಡಿನ ತುಂಬಿ ಕಾಡಿನ ಕಮಲದಲ್ಲಿ ಸೆರೆಯಾಳಾಗಿದೆಯೆಂದು ತಿಳಿಸಲೂ ಇಲ್ಲ; ಹಾಗೆಂದು ತಿಳಿದುದೂ ಇಲ್ಲ.

ಮುನಿಗಳ ಯಾಗಕರ್ಮವೆಂದು ಕೈಯಲ್ಲಿ ಬಿಲ್ಲನ್ನಾಂತು ಬೆನ್ನಿನಲ್ಲಿ ಬತ್ತಳಿಕೆಯನ್ನು ಹೊತ್ತು ವೃಕ್ಷಚ್ಛಾಯೆಗಳಲ್ಲಿ ವಿಶ್ರಮಿಸುತ್ತಿದ್ದ ಮಹಾ

ರಾಜನು ರಾಕ್ಷಸರ ಮೇಲೆ ಕೈಗೊಂಡ ಬಿಲ್ಲಿಗೆ ಹೂಬಾಣಗಳನ್ನು ತೊಟ್ಟು ಶಕುಂತಳೆಗೆ ಗುರಿಯಿಟ್ಟು ಹೊಡೆಯಬೇಕೆಂದು ಇಚ್ಛಿಸಿದ್ದನು. ತಪೋವನದ ವೃಕ್ಷಗಳ ನೆಳಲಲ್ಲಿ ಸಂಚಲಿಸುತ್ತಿದ್ದಾಗ, ಶಕುಂತಳೆಯೆಂಬ ಕಲ್ಪವೃಕ್ಷದಡಿಯಲ್ಲಿ ಕೆಲಹೊತ್ತು ವಿಶ್ರಮಿಸಿ ಜನ್ಮಸಾಫಲ್ಯವನ್ನು ಪಡೆಯಬೇಕೆಂದಿದ್ದನು. ಆದರೆ, ಆಶ್ರಮರೀತಿಗೆ ವಿರುದ್ಧವಾಗಿ ಆತನು ನಡೆಯಲಿಲ್ಲ. ಆತನಿಗೆ ಮುನಿಗಳ ತಪಸ್ಸಿನ ಶಕ್ತಿಯು ಚೆನ್ನಾಗಿ ಅರಿದಿತ್ತು. ಆದುದರಿಂದ ತನ್ನ ಮನಸ್ಸಿನ ವಾಂಛೆಗಳನ್ನು ಆತನು ಸಡಿಲು ಬಿಡಲಿಲ್ಲ.

ಶಕುಂತಳೆಯಾದರೋ ದಿನೇ ದಿನೇ ಕೃಶವಾಗುತ್ತ ಬರುತ್ತಿದ್ದಳು. ಕಣ್ವಾಶ್ರಮಕ್ಕೆ ಅತಿಥಿಯಾಗಿ ಬಂದು, ಅನಂತರ ರಕ್ಷಕನಾಗಿ ನಿಂತು ಸಮಸ್ತ ವೈಖಾನಸರ ಶ್ಲಾಘನೆಗೆ ಪಾತ್ರನಾದ ದುಷ್ಯಂತನನ್ನು ಕಂಡಂದಿನಿಂದ ಅವಳ ಜೀವನದಲ್ಲಿ ಮಾರ್ಪಾಟಗಳು ಉಂಟಾಗಿದ್ದವು. ಮುಖದಲ್ಲಿ ಅವಳ ಕಪೋಲವು ಕೃಶವಾಯಿತು. ದೇಹದಲ್ಲಿ ಮೊದಲೆ ಬಡವಾದ ನಡುವು ಇನ್ನೂ ಬಡವಾಯಿತು. ಸ್ವಭಾವದಿಂದಲೇ ಬಗ್ಗಿದ ತೋಳುಗಳು ಇನ್ನೂ ವಿನತವಾದುವು. ಎಲೆಗಳು ಬಾಡಿಹೋಗಿ ವಾಸಂತಿಯ ಬಳ್ಳಿಯು ಬಿಳಿಯೇರುವಂತೆ ಶಕುಂತಳೆಯ ದೇಹದ ಕಾಂತಿಯೂ ಬಿಳುಪೇರಿತು. ಗಾಳಿಯು ಬೀಸುವಾಗ ವಾಸಂತಿಯ ಬಳ್ಳಿಯು ಪೀಡಿತವಾಗಿ ನಡಗುವಾಗ, ಆ ದೃಶ್ಯವು ಶೋಚನೀಯವೂ ರಮಣೀಯವೂ ಆಗಿ ಕಂಡುಬರುತ್ತದೆ. ಅಂತೆಯೇ, ಕಾಮವಾಸನೆಯಿಂದ ಶಕುಂತಳೆಯು ಪೀಡಿತಳಾಗಿ ಅವಳ ಅವಸ್ಥೆಯು ದುಃಖಕರವಾಗಿದ್ದರೂ, ಅವಳು ಪ್ರಿಯದರ್ಶನೆಯಾಗಿಯೇ ಅಲ್ಲಲ್ಲಿ ಸುಳಿಯುವ ಮಹಾರಾಜನ ಕಣ್ಣುಗಳಿಗೆ ಹಬ್ಬವನ್ನು ಉಂಟುಮಾಡುತ್ತಿದ್ದಳು.

ಪ್ರಿಯಂವದಾನಸೂಯೆಯರಿಗೆ ಶಕುಂತಳೆ ಏಕೆ ದುಃಖಿಸುವಳೆಂಬುದು ಬೇರೆ ಗೊತ್ತಾಗಲಿಲ್ಲ. ಪ್ರಿಯಂವದಾನಸೂಯೆಯರೆಂದರೆ ಶಕುಂತಳೆಯ ಒಡಲಗೆಳತಿಯರು; ಸುಖದಲ್ಲಿಯೂ ದುಃಖದಲ್ಲಿಯೂ ಸಮಾನರಾದವರು. ಅವರಲ್ಲದೆ ಮತ್ತಾರು ಅವಳ ಆರೈಕೆಯನ್ನು ಮಾಡುವವರು? ಆದುದರಿಂದ ಒಮ್ಮೆ ಶಕುಂತಳೆಯೊಡನೆ ಆಕೆಯ ಮನಸ್ಸಿನ ಪೀಡೆಯ ಕಾರಣವನ್ನು

ತಿವರು ಕೇಳಿದರು. ರೋಗಜ್ಞಾನವಿಲ್ಲದೆ ಔಷಧವನ್ನು ಕೊಡಲಾಗುವುದೆ? ಶಕುಂತಳೆಯು ಲಜ್ಜೆಯನ್ನು ತೊರೆದು ಸಖಿಯರೊಡನೆ ತನ್ನ ಮನೋಭಿಲಾಷೆಯನ್ನು ನಿವೇದಿಸಿಕೊಂಡಳು. ಆಪ್ತರಲ್ಲಿ ದುಃಖವನ್ನು ಹೇಳಿಕೊಂಡರೆ, ಅದರ ವೇದನೆಯನ್ನು ಸಹಿಸಬಹುದಂತೆ. ದುಃಖವೆಲ್ಲವೂ ಆಗ ಕರಗಿ ನೀರಾಗಿ ಕಣ್ಣುಗಳ ಮಾರ್ಗವಾಗಿ ಹರಿದು ಹೋಗುವುದಂತೆ. 'ಅನಸೂಯೆ, ಎಂದು ಆ ರಾಜರ್ಷಿಯು ಕೈಯಲ್ಲಿ ಬಿಲ್ಲುಬಾಣಗಳನ್ನು ಧರಿಸಿ ತಪೋವನದಲ್ಲಿ ಸಂಚರಿಸ ಹತ್ತಿದನೋ, ಅಂದೇ ಮದನನು ತನ್ನ ಬಿಲ್ಲಿಗೆ ಪುಷ್ಪಬಾಣಗಳನ್ನಿಟ್ಟು ನನ್ನ ಹೃದಯಕ್ಕೆ ಗುರಿಯಿಟ್ಟಿರುವನು. ರಾಜರ್ಷಿಯಲ್ಲಿ ಅಭಿಲಾಷೆಯುಂಟಾಗಿ ಈ ಅವಸ್ಥೆಯನ್ನು ಹೊಂದಿರುವೆನು. ನನ್ನೀ ಅಭಿಲಾಷೆ ನಿಮಗೆ ಸಮ್ಮತವೆಂದಾದರೆ, ಆ ರಾಜರ್ಷಿಗೆ ನನ್ನಲ್ಲಿ ಕರುಣೆಯುಂಟಾಗುವಂತೆ ಮಾಡಿರಿ. ಇಲ್ಲದಿದ್ದರೆ ಅವಶ್ಯವಾಗಿ ತಿಲೋದಕವನ್ನು ಬಿಡಿರಿ,' ಎಂದು ಶಕುಂತಳೆಯು ಲಜ್ಜೆಯನ್ನು ತೊರೆದು ತನ್ನ ಮನೋಗತವನ್ನು ತಿಳಿಸಿದಳು.

ಈ ಮಾತುಗಳನ್ನು ಕೇಳಿ ಸಖಿಯರಿಗೆ ಪರಮಸಂತೋಷವಾಯಿತಲ್ಲದೆ, ಆಶ್ಚರ್ಯವಾಗಲಿಲ್ಲ. ಹಿಂದೆ, ಮಹಾರಾಜನು ತಮ್ಮೊಡನೆ ಮಾತಾಡುತ್ತಿದ್ದಾಗ ಶೃಂಗಾರಲಜ್ಜೆಯಿಂದ ತಲೆ ಬಗ್ಗಿಸಿದ ಶಕುಂತಳೆಯನ್ನು ಕಂಡು ಪ್ರಿಯಂವದೆಯು, 'ತಾತ ಕಣ್ವನಿದ್ದಿದ್ದರೆ ತನ್ನ ಜೀವಿತ ಸರ್ವಸ್ವವನ್ನಿತ್ತು ಅತಿಥಿಯನ್ನು ಕೃತಾರ್ಥನನ್ನಾಗಿ ಮಾಡುತ್ತಿದ್ದನೆಂದು ಪರಿಹಾಸ ಮಾಡಿದ್ದಳು. ಅನಂತರ, ಶಕುಂತಳೆಯನ್ನು ಮಾತಿನ ಸೆರೆಯಲ್ಲಿ ಬಂಧಿಸಿ, ಮಹಾರಾಜನ ಮನಸ್ಸನ್ನು ಅಳೆದು, ಆತನ ಶೀಲದ ಪರೀಕ್ಷೆಯನ್ನು ಆಕೆಯು ಮಾಡಿದ್ದಳು. ಶಕುಂತಳೆಯ ಅಭಿಲಾಷೆಯು ಸಖಿಯರಿಗೆ ಮಾನ್ಯವಾಗಿತ್ತು. ಏಕೆಂದರೆ, ಯಾವಾತನಲ್ಲಿ ಆಕೆಗೆ ಅನುರಾಗವು ಜನಿಸಿತ್ತೊ ಆತನು ಪೌರವರ ತಿಲಕಪ್ರಾಯನಾಗಿದ್ದನು. ದೈವವಶಾತ್, ತನಗೆ ತಕ್ಕ ವರನನ್ನು ಶಕುಂತಳೆ ಪಡೆದಳೆಂದು ಅವರು ಸಂತಸಪಟ್ಟರು. ಹೂವರಳಿದ ಮಲ್ಲಿಗೆಯು ಚಿಗುರಿದ ಮಾವಿನ ಮರವನ್ನಲ್ಲದೆ, ಮತ್ತಾರನ್ನು ಸೇರಬಲ್ಲುದು? ಮಹಾನದಿಯು ಸಮುದ್ರವನ್ನು ಬಿಟ್ಟು, ಮತ್ತೆಲ್ಲಿ ತಾನೆ ಸೇರುವಳು?

ಶಕುಂತಳೆಯೇನೋ ತನ್ನ ಮನಸ್ಸಿನ ಅಭಿಲಾಷೆಯನ್ನು ಸಖಿಯರೊಡನೆ ತಿಳಿಸಿದ್ದಳು. ಆದರೆ, ಸಮಸ್ತ ಭಾರತದ ಏಕಚ್ಛತ್ರಾಧಿಪತಿಯಾದ ಮಹಾರಾಜನು ತನ್ನೀ ಅಭಿಲಾಷೆಯನ್ನು ತಿರಸ್ಕರಿಸುವನೇನೋ ಎಂದು ಅವಳ ಹೃದಯವು ನಡುಗಿತು. ಆದರೆ, ಯಾವ ಅರಸನಲ್ಲಿ ತನಗೆ ಅನುರಾಗವುಂಟಾಗಿತ್ತೋ ಆತನೂ ತನ್ನಲ್ಲಿ ಅನುರಕ್ತನಾಗಿದ್ದನೆಂದು ಅವಳಿಗೆ ಹೇಗೆ ತಾನೆ ಗೊತ್ತು? ಶಕುಂತಳೆಯ ಹಂಬಲಿನಿಂದ ದುಷ್ಯಂತನು ಹಗಲಿರುಳು ಕೈಯಲ್ಲಿ ಬಿಲ್ಲನ್ನು ಹೊತ್ತು, ಮುನಿಗಳ ಯಾಗರಕ್ಷಣವೆಂದು ತಿರುಗುತ್ತಿದ್ದನಲ್ಲದೆ, ಅವನಿಗೊಂದು ದಿನವೂ ಕಣ್ಣಿಗೆ ನಿದ್ದೆಯು ಹತ್ತುತ್ತಿದ್ದಿಲ್ಲ. ಅವನ ದೇಹವು ಕೃಶವಾಗಿತ್ತು. ಹಿಮದಂತೆ ಶೀತಲನಾದ ಚಂದ್ರನ ಕಿರಣಗಳು ಅವನ ದೇಹವನ್ನು ಸುಟ್ಟು ಬಿಟ್ಟಿದ್ದವು. ಮದನನ ಕುಸುಮಕೋಮಲದ ಶರಗಳು ಅವನ ದೇಹವನ್ನು ಜರ್ಜರಗೊಳಿಸಿದ್ದವು. ಅವನ ಭುಜದ ಬಳೆಯು ಕಣ್ಣಿಂದ ಸುರಿದ ಅಶ್ರುಗಳಿಂದ ವಿವರ್ಣವಾಗಿ ದಿನೇ ದಿನೇ ಕೆಳಕೆಳಗೆ ಜಾರುತ್ತಿದ್ದಿತು. ಅಂತಹ ಅರಸನೇ ಶಕುಂತಳೆಯನ್ನು ಪ್ರಾರ್ಥಿಸುವನಾದರೆ ಶಕುಂತಳೆಗೆ ಮಹಾರಾಜನು ಹೇಗೆ ದುರ್ಲಭನಾದಾನು? 'ಹುಚ್ಚಿ, ಯಾವ ಮನುಷ್ಯನಾದರೂ ಶರೀರಕ್ಕೆ ತಂಪನ್ನೀಯುವ ಶರತ್ಕಾಲದ ಬೆಳದಿಂಗಳನ್ನು ವಸ್ತ್ರದಿಂದ ನಿವಾರಿಸುವನೇ?' ಎಂದು ಸಖಿಯರು ಶಕುಂತಳೆಯನ್ನು ಸಂತಯಿಸಿದರು.

ದುಷ್ಯಂತನನ್ನು ಇಚ್ಛಿಸಿದ ಶಕುಂತಳೆಯ ಅವಸ್ಥೆಯು ದಿನೇ ದಿನೇ ವಿಷಮವಾಗುತ್ತ ಒರುತ್ತಿದ್ದಿತು. ಸಖಿಯರು ಈ ವಿಷಯದಲ್ಲಿ ತಾವು ಆಕೆಗೆ ಕೈಲಾದಷ್ಟು ಸಹಾಯವನ್ನು ಮಾಡುವುದು ತಮ್ಮ ಕರ್ತವ್ಯವೆಂದು ಎಣಿಸಿಕೊಂಡರು. ಸೋಮತೀರ್ಥದಿಂದ ಕಣ್ವನು ಹಿಂತೆರಳಿದ್ದರೆ, ಆತನು ನಿಶ್ಚಯವಾಗಿಯೂ ಶಕುಂತಳೆಯ ಮನೋಭಿಲಾಷೆಯನ್ನು ಪೂರಯಿಸದೆ ಇರುತ್ತಿದ್ದಿಲ್ಲ. ಮಹಾರಾಜನೇನೊ ಕಣ್ವಾಶ್ರಮದಲ್ಲಿ ಹೆಚ್ಚು ಕಾಲ ಇರಲಾರನು; ಅವನು ಶೀಘ್ರದಲ್ಲಿಯೆ ಹೊರಟು ಹೋಗುವವನಿರುವನೆಂದು ಅವರು ಕೇಳಿ ತಿಳಿದಿದ್ದರು. ಬಳಿ ಬಂದ ಅಲೆಗೆ ತಲೆಗೊಡದಿದ್ದರೆ, ಮತ್ತೆ ಕಾದು ನಿಲ್ಲಲು ಸಮಯವಿದೆಯೆ? ವಿಷಯವಿದನ್ನು ರಹಸ್ಯವಾಗಿಯೂ

ಶೀಘ್ರವಾಗಿಯೂ ಮಹಾರಾಜನಿಗೆ ಯಾವ ರೀತಿಯಿಂದ ತಿಳಿಸಬಹುದೆಂದು ಅವರಿಬ್ಬರೂ ಹಂಚಿಕೆಗಳ ಮೇಲೆ ಹಂಚಿಕೆಗಳನ್ನು ಹುಡುಕಿ ಶಕುಂತಳೆಯನ್ನು ಶೈತ್ಯೋಪಚಾರಗಳಿಂದ ಉಪಚರಿಸುತ್ತಿದ್ದರು. ಆಕೆಗೆ ತಾವರೆಯೆಲೆಯಲ್ಲಿ ಗಾಳಿಬೀಸಿ ದೇಹಕ್ಕೆ ಸ್ವಾಸ್ಥ್ಯವನ್ನು ಉಂಟುಮಾಡಲು ಪ್ರಯತ್ನಿಸುತ್ತಿದ್ದರು. ಕಡೆಗೆ ಪ್ರಿಯಂವದೆಗೊಂದು ಉಪಾಯವು ಹೊಳೆಯಿತು. ಪ್ರಿಯನಿಗೆ ಪ್ರೇಮಪತ್ರವೊಂದನ್ನು ಬರೆಯಲು ಆಕೆ ಶಕುಂತಳೆಗೆ ಸೂಚಿಸಿದಳು. ತಾನದನ್ನು ದೇವತಾಪ್ರಸಾದವೆಂದು ಹೂದಳಿರ ಮರೆಯಲ್ಲಿ ಮಡಗಿ, ಅರಸನಿಗೆ ಪ್ರಾಪ್ತಿಸುವೆನೆಂದು ಧೈರ್ಯದಿಂದ ಅವಳು ಹೇಳಿದಳು. ಅನಸೂಯೆಯು ಪ್ರಿಯಂವದೆಯ ಸೂಚನೆಯನ್ನು ಅನುಮೋದಿಸಿದಳು. ಶಕುಂತಳೆಯೂ ಇದಕ್ಕೆ ಒಪ್ಪಿದಳು.

ಯಾಗಕರ್ಮವು ಮುಗಿದು, ವೈಖಾನಸರಿಂದ ಅಪ್ಪಣೆಯನ್ನು ಪಡೆದು ರಾಜಧಾನಿಗೆ ತೆರಳಲಿದ್ದ ದುಷ್ಯಂತಮಹಾರಾಜನು ಶಕುಂತಳೆಯನ್ನು ಹಂಬಲಿಸಿ ಕಳವಳಪಡುತ್ತಿದ್ದ ತನ್ನ ಮನಸ್ಸನ್ನು ವಿನೋದಗೊಳಿಸಲು ಮಾಲಿನೀತೀರದತ್ತ ನಡೆದಿದ್ದನು. ಮಾಲಿನಿಯ ಪುಳಿನದಲ್ಲಿ ಕಂಡುಬಂದ ಹಜ್ಜೆಗಳನ್ನು ಕಂಡು, ಶಕುಂತಳೆಯು ತನ್ನ ಸಖಿಯರೊಡನೆ ಅಲ್ಲಿಗೆ ಬಂದಿರಬೇಕೆಂದು ಊಹಿಸಿದನು. ಗಿಡಗಳ ಹೂಗಳನ್ನು ಕೊಯ್ಯುತ್ತ, ಬಳ್ಳಿಗಳ ತಳಿರನ್ನು ಕೀಳುತ್ತ ಸಖಿಯರು ಶಕುಂತಳೆಯೊಡನೆ ಅದಾಗಲೆ ಅಲ್ಲಿಗೆ ಹೋಗಿರಬೇಕೆಂದು ಆತನು ಮನಗಂಡನು. ಏಕೆಂದರೆ, ಗಿಡಗಳಲ್ಲಿ ಹೂಗಳ ತೊಟ್ಟು ಇನ್ನೂ ಬಾಡಿದ್ದಿಲ್ಲ. ತಳಿರ್ಗಳ ತೊಟ್ಟಿಂದ ಹೊರ ಸುರಿದ ಹಾಲು ಇನ್ನೂ ಗಟ್ಟಿಯಾಗಿದ್ದಿಲ್ಲ. ಅರಸನು ತನಗಲ್ಲಿಯೆ ತೋರುತ್ತಿದ್ದ ನೀರು ಹಬ್ಬೆ ಬಳ್ಳಿಯಿಂದ ಹೊದಿಸಿರುವ ಲತಾಗೃಹದತ್ತ ನಡೆದನು. ಶಕುಂತಳೆಯು ಅಲ್ಲಿ ತನ್ನ ಸಖಿಯರೊಡಗೂಡಿ, ಹಿಡಿಗವಡೆ, ಸೆಡೆಗವಡೆ, ಕಣ್ಣುಮುಚ್ಚು, ಸೆಡೆಸೆಂಡು, ಪುಟಸೆಂಡು, ಗುತ್ತಿಸೆಂಡು, ಗುಡಿಗಟ್ಟು, ಕುಂಟಪಿಲಿ, ಜಡೆಗೋಲು ಮೊದಲಾದ ಆಟಗಳನ್ನಾಡಿ ಕಾಲವನ್ನು ಕಳೆಯುತ್ತಿರಬಹುದೆಂದು ಆತನು ಅತ್ತ ನಡೆದನು.

ಆದರೆ ಶಕುಂತಳೆ ಇಂದು ಎಂದಿನಂತೆ ಸಂತೋಷಚಿತ್ತಳಾಗಿ ಅರಸನಿಗೆ ಕಂಡುಬರಲಿಲ್ಲ. ಸಖಿಯರು ಆಕೆಗೆ ತಾವರೆಯೆಲೆಯಲ್ಲಿ ಗಾಳಿ

ಯನ್ನು ಬೀಸುತ್ತಿದ್ದರು; ವೈಗೆ ಲಾಮಂಚವನ್ನಿಟ್ಟು ಶೈತ್ಯೋಪಚಾರ ಗಳನ್ನು ಮಾಡುತ್ತಿದ್ದರು. ಅರಸನು ಶಕುಂತಳೆಯು ಬಳಲಿದ್ದುದರ ಕಾರಣವನ್ನು ಆಲೋಚಿಸುತ್ತಿದ್ದಾಗ ತಾನೆ, ಆಕೆಯು ಎದ್ದು ಕೂತು ಸಮೀಪವೇ ಇದ್ದ ತಾವರೆಯೆಲೆಯೊಂದನ್ನು ತೊಡೆಯಮೇಲಿಟ್ಟು, ಅದರಲ್ಲಿ ತನ್ನ ಕೈಬೆರಳ ಉಗುರುಗಳಿಂದ ಏನನ್ನೋ ಬರೆಯುವುದನ್ನು ಕಂಡನು; ಕಂಡು ಬೆರಗಾದನು.

ಪ್ರಿಯಂವದೆಯ ಸೂಚನೆಯಂತೆ ಶಕುಂತಳೆಯು ತನ್ನ ಪ್ರಿಯನಿಗೆ ಪತ್ರವನ್ನು ಬರೆಯಲು ಉದ್ಯುಕ್ತಳಾಗಿದ್ದಳು. ಆದರೆ ಸಮೀಪದಲ್ಲಿ ಲೇಖನ ಸಾಮಗ್ರಿಗಳು ಇರಲಿಲ್ಲ; ಆಶ್ರಮಕ್ಕೆ ಹೋಗಿ ಅವುಗಳನ್ನು ತರುವುದೆಂದರೆ, ಹೂಡಲಿದ್ದ ಉಪಾಯವು ಅಪಾಯವಾಗಿ ಪರಿಣಮಿಸುವ ಸಂಭವವಿತ್ತು. ಆದುದರಿಂದ ಆಕೆಯು ಶುಕೋದರದಂತೆ ಕೋಮಲವಾದ ಅಲ್ಲಿಯೆ ಬಿದ್ದುಕೊಂಡಿದ್ದ ತಾವರೆಯೆಲೆಯೊಂದರಲ್ಲಿ ಪ್ರೇಮ ಪತ್ರಿಕೆಯನ್ನು ಬರೆಯುವುದೆಂದು ನಿಶ್ಚಯಿಸಿದಳು. ಮೊದಲು ಆಕೆಗೆ ಏನು ಬರೆಯುವುದೆಂದು ತೋಚಲಿಲ್ಲ; ಮತ್ತೆ ಆಲೋಚಿಸಿ, ಆಕೆಯು ಮೃದುವಾಗಿಯೂ ಭಾವಗರ್ಭಿತವಾಗಿಯೂ ಸಂಕ್ಷೇಪವಾಗಿಯೂ ಪತ್ರವೊಂದನ್ನು ರಚಿಸಿದಳು. 'ನಿರ್ದಯನೆ, ನಿನ್ನ ಮನಸ್ಸನ್ನು ನಾನರಿಯೆ; ಆದರೆ ಹಗಲಿರುಳು ನಿನ್ನೊಡನೆ ಸೇರಬೇಕೆಂದಿರುವ ನನ್ನ ದೇಹವನ್ನು ಮದನನು ಪೀಡಿಸಿರುವನು,' ಎಂಬುದೇ ಆಕೆಯು ಬರೆದ ಪತ್ರಿಕೆಯ ಭಾವವಾಗಿತ್ತು. ತಾನು ಬರೆದ ಪತ್ರವನ್ನು ಶಕುಂತಳೆಯು ಸಖಿಯರಿಗೆ ಓದಿಹೇಳಿದಳು. ಸಖಿಯರು ಶಕುಂತಳೆಯನ್ನು ಮುಂಚೆ ಮೂದಲಿಸಿರಬಹುದು; ವಕ್ರೋಕ್ತಿಗಳಿಂದ ಹಾಸ್ಯಮಾಡಿರಲೂ ಬಹುದು. ಆದರೆ, ಅದೆಲ್ಲವೂ 'ನೊರೆ, ನೊರೆ, ನೊರೆಯಂತಿರ್ಕುಂ'.

ಲತಾಗೃಹದ ಸಮೀಪವನ್ನಾಂತ ದುಷ್ಯಂತಮಹಾರಾಜನಿಗೆ ಶಕುಂತಳೆಯು ಓದಿದ ಪತ್ರವನ್ನು ಕೇಳಿ ಮೈ ರೋಮಾಂಚವಾಯಿತು. ಹಿಂದೊಮ್ಮೆ ಈ ತಪಸ್ವಿಕನ್ಯೆಗಳೊಡನೆ ಮಾತಾಡುತ್ತಿದ್ದಾಗ ಆಶ್ರಮದಲ್ಲಿ ಕೋಲಾಹಲವೆದ್ದ ಕಾರಣ, ಅತಿಥಿಗೆ ತಕ್ಕ ಸನ್ಮಾನವನ್ನು ಮಾಡಲು ಮುನಿಕನ್ಯೆ

ಗಳಿಗೆ ಅವಕಾಶ ಸಿಗದೆ, ಮುಂದೊಮ್ಮೆ ಬಂದು ತಮ್ಮಿಂದ ಅತಿಥಿ ಸತ್ಕಾರವನ್ನು ಅವಶ್ಯವಾಗಿ ಪಡೆಯಬೇಕೆಂದು ಅವರು ವಿನಂತಿಸಿದ್ದರು. ಆದರೆ, ಆಶ್ರಮದಲ್ಲಿ ತಾನಿಷ್ಟು ದಿವಸ ತಂಗಿದ್ದರೂ, ಮುನಿಕನ್ಯೆಗಳ ಅಪೇಕ್ಷೆಯಂತೆ ತಾನು ನಡೆಯದೆ ಅಪರಾಧಿಯಾಗಿರುವೆನೆಂದು ತನ್ನನ್ನೆ ಹಳಿದುಕೊಂಡನು. ಆದುದರಿಂದಲೆ, ಶಕುಂತಳೆಯು ಆತನಿಗೆ 'ನಿರ್ದಯನೆ' ಎಂದು ಪರುಷವಾಗಿಯೆ ಸಂಬೋಧಿಸಿರಬೇಕು. ಶಕುಂತಳೆಯು ತನ್ನನ್ನೆ ಕುರಿತು ಬರೆದ ಪತ್ರವನ್ನು ಕೇಳಿ, ಮಹಾರಾಜನು ಬೇಗನೆ ಅವಳ ಸಮೀಪವನ್ನೈದಿದನು. 'ತನುಗಾತ್ರಿ! ಚಂದ್ರನನ್ನು ಕಂದಿಸುವಂತೆ ಸೂರ್ಯನು ನೈದಿಲೆಯನ್ನು ಪೀಡಿಸುವುದಿಲ್ಲ. ನಿನ್ನನ್ನು ಇಷ್ಟುದಿವಸವೂ ಮದನನು ತಪಿಸಿರುವನಾದರೆ, ನನ್ನನ್ನಾತನು ಸುಟ್ಟಿರುವನು,' ಎಂದೇ ಆತನು ಸಂಬೋಧಿಸಿದನು.

ಶಕುಂತಳೆಯ ಮನೋಭಿಲಾಷೆಯು ಮೂರ್ತಿಗೊಂಡಂತೆ ಸಮ್ಮುಖದಲ್ಲಿ ಬಂದು ನಿಂತ ದುಷ್ಯಂತಮಹಾರಾಜನನ್ನು ಸಖಿಯರು ಕಂಡು ಆತನಿಗೆ ಸ್ವಾಗತವನ್ನು ಬಯಸಿದರು. ಶಕುಂತಳೆಯು ತನ್ನ ಪ್ರಿಯನು ಬಂದುದನ್ನು ಕಂಡು ಲಜ್ಜೆಯಿಂದ ಮುಖವನ್ನು ತಗ್ಗಿಸಿದಳು. ಅನಂತರ ಎದ್ದುನಿಂತು ಅಲ್ಲಿಂದ ಹೋಗಲಿಚ್ಛಿಸಿದಳು. ಅರಸನು, 'ಶಕುಂತಳೆಯೆ! ಉಪಚಾರ ಲಜ್ಜೆಗಳಿಗಾಗಿ ನಿನ್ನೀ ಕೋಮಲವಾದ ದೇಹವನ್ನು ಶ್ರಮಿಸಬೇಡ. ಕುಸುಮ ಶಯನದಲ್ಲೆ ಕೂತುಕೊಂಡಿರು' ಎಂದು ತನ್ನ ಪ್ರಿಯೆಗೆಂದನು.

'ನಿಮ್ಮಿಬ್ಬರಲ್ಲಿ ಅನುರಾಗವು ಪ್ರತ್ಯಕ್ಷವಾಗಿ ಕಂಡುಬರುತ್ತಿದೆ; ಅಂತಿದ್ದರೂ ಸಖೀಸ್ನೇಹದ ಕಾರಣದಿಂದ ಇನ್ನೊಮ್ಮೆ ಆ ವಿಷಯವನ್ನೇ ಹೇಳಬೇಕೆಂದಿರುವೆನು,' ಎಂದು ಪ್ರಿಯಂವದೆಯು ಮಾತಿಗೆ ಮೊದಲು ಮಾಡಿದಳೇ.

'ಹೌದು. ಹೇಳಬೇಕಾದುದನ್ನು ಹೇಳಲೇಬೇಕು. ಇಲ್ಲದಿದ್ದರೆ ಬೇಸರಕ್ಕೆ ಕಾರಣವಾಗುತ್ತದಲ್ಲವೇ?' ಎಂದು ಅರಸನು ಒಪ್ಪಿಕೊಂಡನು.

'ತನ್ನ ದೇಶದಲ್ಲಿರುವ ಜನರ ಆಪತ್ತನ್ನು ಪರಿಹರಿಸುವುದು ಅರಸನ ಧರ್ಮವಲ್ಲವೇ? ನಮ್ಮೀ ಪ್ರಿಯಸಖಿಯು ನಿನ್ನನ್ನುದ್ದೇಶಿಸಿ ಬಹಳ

ಪೀಡಿತಳಾಗಿರುವಳು. ಅವಳ ಜೀವಿತವನ್ನು ಕಾಪಾಡುವುದು ನಿನ್ನ ಧರ್ಮವಾಗಿದೆ,' ಎಂದು ಪ್ರಿಯಂವದೆಯು ತನ್ನ ಹೆಸರಿಗೆ ತಕ್ಕಂತೆ, ತನ್ನ ಜವಾಬುದಾರಿಕೆಯ ಗೂಢಕರ್ತವ್ಯಕ್ಕೆ ಸರಿಯಾದ ಮಾತನ್ನು ಹೇಳಿ, ಕಣ್ವನಿಲ್ಲದ ವೇಳೆಯಲ್ಲಿ ಕಣ್ವನ ಪಾತ್ರವನ್ನು ವಹಿಸಿದಳು.

'ನಮ್ಮಾ ಪ್ರಣಯವು ಸಮಾನವಾಗಿದೆ; ಅನ್ಯೋನ್ಯ ಪ್ರೇಮವು ನಮ್ಮಲ್ಲಿ ನೆಲಸಿದೆಂಬುದು ನಿಜವು. ನಾನು ಅನುಗೃಹೀತನಾದೆನು' ಎಂದು ಅರಸನು ಹೇಳಿದನು.

ಇಷ್ಟು ಹೊತ್ತು ಶಕುಂತಳೆಯು ಸುಮ್ಮಗಿದ್ದಳು. 'ಮಹಾರಾಜನು ರಾಣಿವಾಸವನ್ನು ಬಿಟ್ಟು, ಹಲವು ಕಾಲವು ಸಂದಿತು. ಅವನನ್ನೇಕೆ ತಡೆಯಬೇಕು?' ಎಂದು ಮೆಲ್ಲನೆ ಶಕುಂತಳೆಯು ತನ್ನ ಪರವಾಗಿ ಮಾತಾಡುವ ಸಖಿಯ ಕಿವಿಯಲ್ಲಿ ನುಡಿದಳು. ಅದು ಅರಸನಿಗೂ ಕೇಳಿಸಿತು. ಆ ಮಾತನ್ನು ಕೇಳಿದೊಡನೆಯೆ, ತಾನಿಷ್ಟು ಶಕುಂತಳೆಯಲ್ಲಿ ಅನನ್ಯ ಪರಾಯಣನಾದರೂ, ಆಕೆಯು ಅನ್ಯಥಾ ಭಾವಿಸುವಳೆಂದು ಆತನು ನೊಂದನು. ಮೊದಲೆ ಮದನಬಾಣಹತನಾದವನು ಪುನಃ ಶಕುಂತಳೆಯ ವಾಗ್ಬಾಣಗಳಿಂದ ಆಹತನಾದನು. ಅನಸೂಯೆಯಾಗ ಅರಸನನ್ನು ಕುರಿತು 'ಮಿತ್ರನೆ, ಶಕುಂತಳೆಯು ನಿನ್ನಲ್ಲಿ ಮೋಹಿತಳಾಗಿರುವಳು; ಆದರೆ 'ರಾಜಾನೋ ಬಹುವಲ್ಲಭಾಃ' ಎಂದಿರುವುದಷ್ಟೆ? ಬಂಧುಜನಗಳು ಮತ್ತೆ ಚಿಂತೆಗೊಳಗಾಗದಂತೆ ಈಕೆಯ ವಿಷಯದಲ್ಲಿ ವರ್ತಿಸುವೆಯಲ್ಲವೆ?' ಎಂದು ಸೌಮ್ಯವಾದ ನುಡಿಗಳಿಂದ ಅರಸನ ಹೃದಯವನ್ನು ಉಪಚರಿಸಿದಳು. 'ಎಲೆ ಸಖಿ, ಹಾಗೆ ಎಣಿಸದಿರು. ಅನೇಕ ಹೆಂಡಂದಿಯರು ನನಗಿದ್ದರೂ ನನ್ನ ಪುರುವಂಶದ ಪ್ರತಿಷ್ಠೆಗೆ ಇವರಿಬ್ಬರೇ ಸರಿ—ಸಾಗರ ನೇಮ್ಮಿತೆಯಾದ ಧರಿತ್ರಿಯೂ ಪ್ರೀತಿಪಾತ್ರಳಾದ ನಿಮ್ಮಾ ಸಖಿಯು,' ಎಂದು ಅರಸನು ಅನಸೂಯೆಗೆ ಆಶ್ವಾಸನೆಯನ್ನು ಕೊಟ್ಟೊಡನೆಯೆ, ಸಖಿಯರ ಮನಸ್ಸು ನೆಮ್ಮದಿ ಹೊಂದಿತು. ಅರಸನ ಮಾತಿನಲ್ಲಿ ಅವರಿಗೆ ವಿಶ್ವಾಸವು ತುಂಬಿತು. ಅವರು ಇದೆಲ್ಲದರ ಹಾನಿವೃದ್ಧಿಗಳನ್ನು ಹೆಗಲೇರಿಸಿಕೊಂಡರು.

ಅಲ್ಲಿಯೆ ಸಮೀಪದಲ್ಲಿ ಒಂದು ಜಿಂಕೆಮರಿಯು ಸುಳಿಯುತ್ತಿತ್ತು. ಅದು ತನ್ನ ತಾಯಿಯನ್ನು ಕಾಣದೆ ಕಳವಳಗೊಂಡು, ಅತ್ತಿತ್ತ ಹುಡುಕುತ್ತಿದೆ

ಯೆಂದು ಪ್ರಿಯಂವದೆಯು ಅನಸೂಯೆಗೆ ಕಣ್ಣುಸನ್ನೆ ಮಾಡಿ ಸೂಚಿಸಿದಳು. ಅನಂತರ, 'ಬಾ, ಇದನ್ನು ಸೇರಿಸೋಣ,' ಎಂದು ಅವಳು ಅನಸೂಯೆ ಯೊಡನೆ ಹೊರಟು ದುಷ್ಯಂತಶಕುಂತಳೆಯರಿಬ್ಬರನ್ನು ಒತ್ತಟ್ಟಿಗೆ ಬಿಟ್ಟಳು. ಶಕುಂತಳೆಯು ಶಾಲೀನತೆಯಿಂದ ತನ್ನನ್ನು ಬಿಟ್ಟು ಹೊರಟು ಹೋಗುವ ಸಖಿಯರಿಗೆ 'ಎಲೌ ಸಖಿಯರೆ, ಇಬ್ಬರಲ್ಲಿ ಯಾರಾದರೂ ಒಬ್ಬರು ಬನ್ನಿ. ನಾನು ಅಶರಣೆಯಾದೆ,' ಎಂದು ವಿಜ್ಞಾಪಿಸಿದಳು. ಸಖಿಯರಾಗ ಜಿಂಕೆ ಮರಿಯನ್ನು ಕೈಯಲ್ಲಿ ಹೊತ್ತು, 'ಭೂಮಂಡಲಕ್ಕೆ ಅಧಿಪತಿಯಾದವನು ಸಮೀಪದಲ್ಲಿರುವನಲ್ಲವೆ? ತಾಳಿ ಬರುವೆವು. ಹೆದರಿಕೆಯೇನು?' ಎಂದು ನಸುನಗುತ್ತ ಹೊರಟೇಬಿಟ್ಟರು. ಸಖಿಯರು ಹೊರಟು ಹೋದರೆಂದು ಶಕುಂತಳೆ ಬಿಸುಸುಯ್ದಳು. ಅರಸನಾಗ 'ಸಾಕು, ಸಾಕು, ಏತಕ್ಕೆ ಭಯ ಪಡುವೆ? ನಾನು ನಿನ್ನ ಸಮೀಪದಲ್ಲಿಯೇ ಇರುವೆನಲ್ಲವೆ?' ಎಂದು ತನ್ನ ಪ್ರಿಯೆಯನ್ನು ಸಂತಯಿಸಿದನು.

ಶಕುಂತಳೆ ಎದ್ದು ಹೋಗಲಿಚ್ಛಿಸಿದಳು. ತಾನಿಂತು ಸ್ವಾತಂತ್ರ್ಯ ವನ್ನು ವಹಿಸಿ, ಉಚ್ಛೃಂಖಲೆಯಂತೆ ನಡೆಯುತ್ತಿರುವುದು ಆಶ್ರಮದ ಗೌರ ವಕ್ಕೆ ಕುಂದೆಂದು ಅವಳು ಎಣಿಸಿದಳು. 'ಸ್ವಾತಂತ್ರ್ಯದಿಂದ ನಡೆದು ನಾನು ಹಿರಿಯರೆದುರು ಅಪರಾಧಿಯಾಗುವವಳಲ್ಲ,' ಎಂದವಳು ಎದ್ದು ನಡೆದು ಬಿಟ್ಟಳು. ಬಿಸಿಲು ಕಾಯುತ್ತಿದ್ದಿತು. ಶಕುಂತಳೆಯ ದೇಹವು ಕೋಮಲವಾಗಿತ್ತು. ಆದುದರಿಂದ ಅರಸನು ತನ್ನ ಸಮೀಪದಿಂದ ನೀತಿಗೆ ಹೆದರಿ ನಡೆಯುತ್ತಿರುವ ಶಕುಂತಳೆಯನ್ನು ಬಲಾತ್ಕಾರದಿಂದ ತಡೆದು ನಿಲ್ಲಿಸಿದನು.

'ಪೌರವನೆ, ನೀತಿಬಾಹಿರನಾಗದಿರು. ಶೀಲವನ್ನು ರಕ್ಷಿಸು. ಮದನ ಪೀಡಿತಳಾದರೂ ಸ್ವಾತಂತ್ರ್ಯವನ್ನು ನಾನವಲಂಬಿಸುವವಳಲ್ಲ' ಎಂದು ಕೋಪದಿಂದ ತನ್ನ ಮೈಯನ್ನು ಮುಟ್ಟಿದ ಪ್ರಿಯನಿಗೆ ಆಕೆ ನುಡಿದು ಬಿಟ್ಟಳು.

ಅರಸನು ನಕ್ಕನು. 'ಎಲೇ ಭೀರು! ಏತಕ್ಕಂಜುವೆ? ಗುರುಜನಗಳಿ ಗೇತಕ್ಕೆ ಹೆದರುವೆ? ಪೂಜ್ಯರಾದ ಗುರುಗಳು ಇದನ್ನು ದೋಷವೆಂದು

ಗ್ರಹಿಸಲಿಕ್ಕಿಲ್ಲ. ಹಿಂದೆ ರಾಜರ್ಷಿಕನ್ಯೆಗಳನೇಕರು ಗಾಂಧರ್ವರೀತಿಯಿಂದ ವಿವಾಹವಾಗಿ ಹಿರಿಯರ ಒಪ್ಪಿಗೆಯನ್ನು ಪಡೆದಿರುವರು,' ಎಂದು ಸಮಾಧಾನಪಡಿಸಿದನು.

'ಹಾಗಿದ್ದರೂ ನನ್ನನ್ನು ಬಿಡು; ಸಖೀಜನರ ಅನುಮತಿಯನ್ನು ಇನ್ನೊಮ್ಮೆ ಕೇಳುವೆನು,' ಎಂದು ಅಸಹಾಯಳಾಗಿ ಆಕೆ ತಿರಿಗಿ ಹೇಳಿದಳು.

ಅರಸನು ನಗುತ್ತ, 'ಆಗಲಿ, ಬಿಡುವೆನು,' ಎಂದನು.

ಅಷ್ಟರೊಳಗೆ ಶಕುಂತಳೆಯ ಶರೀರವು ಸ್ವಸ್ಥವಿಲ್ಲವೆಂದು ಯಾರಿಂದಲೋ ಕೇಳಿ ದಿಗಿಲುಗೊಂಡ ಗೌತಮಿಯು ಮಂತ್ರೋದಕದೊಡನೆ ಮಾಲಿನೀ ತೀರದತ್ತ ಧಾವಿಸಿದ್ದಳು. ಅವಳಿತ್ತ ಬರುತ್ತಿದ್ದಾಗ, ಹುಲ್ಲೆ ಮರಿಯನ್ನು ಅದರ ತಾಯಿಯೊಡನೆ ಸೇರಿಸುವ ನೆವದಿಂದ ದುಷ್ಯಂತಶಕುಂತಳೆಯರಿಬ್ಬರನ್ನು ಲತಾಗೃಹದಲ್ಲಿ ಬಿಟ್ಟು ಬಂದ ಪ್ರಿಯಂವದಾನಸೂಯೆಯರು ಆಶ್ರಮದತ್ತ ನಡೆಯುತ್ತಿದ್ದರು. ಪ್ರಿಯಂವದಾನಸೂಯೆಯರನ್ನು ಕಂಡು, ಶಕುಂತಳೆಯ ಅವಸ್ಥೆ ಏನಾಗಿದೆಯೋ ಎಂದು ಮುದುಕಿಗೆ ಜೀವವೇ ಹಾರಿ ಹೋಗಿರಬೇಕು; ಮುದುಕಿಯನ್ನು ಕಂಡು, ಹುಡುಗಿಯರ ನರನಾಡಿಗಳಲ್ಲಿ ರಕ್ತದ ಚಲನವು ವಿವೃದ್ಧವಾಗಿ ಹೃದಯವು ಕಂಪಿಸಿರಬೇಕು.

'ಶಕುಂತಳೆಗೆ ಸುಖವೇ' ಎಂದು ಮುದುಕಿಯೆಂದಳು. 'ಅದಕ್ಕಾಗಿಯೇ, ನಿಮ್ಮನ್ನು ಕರೆತರುವೆವೆಂದು ಆಶ್ರಮದತ್ತ ಬರುತ್ತಿದ್ದೆವೆ'ಂದು ಮುದುಕಿಯೊಡನೆ ಸಖಿಯರು ಮಾಲಿನೀತೀರದತ್ತ ಹಿಂತಿರುಗಿದರು. ಮುದುಕಿಗೆ ಗುಟ್ಟೆಲ್ಲ ತಿಳಿದು ಅನರ್ಥವಾಗಬಹುದೆಂದು ಪ್ರಿಯಂವದೆಯು ಶಂಕಿಸಿದಳು. ಆದರೆ, ಅವಳು ಪ್ರತ್ಯುತ್ಪನ್ನಮತಿಯು. ದೂರದ ಕೊಳದಲ್ಲಿ ತನ್ನ ಸಹಚರನೊಡನೆ ವಿಹರಿಸುತ್ತಿದ್ದ ಚಕ್ರವಾಕವಧುವೊಂದನ್ನು ಅವಳು ಕಂಡಳು. ಆ ದಂಪತಿಗಳಿಗೆ ಸಾಯಂಕಾಲವಾದೊಡನೆಯೆ ವಿಯೋಗವು ಪ್ರಸಿದ್ಧವು. 'ಎಲೇ ಚಕ್ರವಾಕವಧುವೆ, ರಾತ್ರೆ ಸಮೀಪಿಸಿತು; ಸಹಚರನನ್ನು ಬೀಳ್ಕೊಡು' ಎಂದು ಲತಾಗೃಹವು ಸಮೀಪಿಸಿದೊಡನೆಯೆ ಅವಳು ಹೇಳಿ ಬಿಟ್ಟಳು.

ದುಷ್ಯಂತನೊಡನಿದ್ದ ಶಕುಂತಳೆಗಿದರ ಅರ್ಥವು ಹೊಳೆಯಿತು. ಗೌತಮಿಯು ಬರುತ್ತಿರುವಳೆಂದು ತಿಳಿದು ತನ್ನ ವಲ್ಲಭನನ್ನು ಗಿಡ ಪೊದರುಗಳಲ್ಲಿ ಅವಳು ಅಡಗಿಸಿ ಬಿಟ್ಟಳು. ಸಮಸ್ತಭಾರತದ ಏಕಚ್ಛತ್ರಾಧಿಪತಿಯು ಮರಗಳ ತಳಿರೆಡೆಯಲ್ಲಿ ಅಡಗಿಕೊಂಡನು. ಗೌತಮಿಯು ಬಂದಳು; ಶಕುಂತಳೆಯೊಡನೆ ಆರೋಗ್ಯವನ್ನು ವಿಚಾರಿಸಿದಳು. ಮಂತ್ರೋದಕವನ್ನು ಕುಡಿಯಕೊಟ್ಟು, ಸ್ವಲ್ಪ ಸಮಾಧಾನವಾಯ್ತೆಂದನಂತರ ಶಕುಂತಳೆಯೊಡನೆ ಆಶ್ರಮಕ್ಕೆ ತೆರಳಿದಳು. ಸಂದರ್ಭಕ್ಕೆ ಮಣಿಯಬೇಕಾದುದರಿಂದ ಶಕುಂತಳೆಯು ತನ್ನ ಪ್ರಿಯನನ್ನು ಅಲ್ಲಿಯೆ ಬಿಟ್ಟು, ಗೌತಮಿಯನ್ನು ಅನುಸರಿದಳು. ಆದರೆ, 'ಲತಾವಲಯನೆ, ಸಂತಾಪಹಾರಕನೆ, ಇನ್ನೊಮ್ಮೆಗೆ ಬರುವೆನು,' ಎಂದು ಮರಬಳ್ಳಿಗಳಿಗೆ ಸಂಬೋಧಿಸಿ ಮರೆಯಲ್ಲಿದ್ದ ಪ್ರಿಯನನ್ನು ಬೀಳ್ಕೊಟ್ಟು ಮೆಲ್ಲನೆ ಶಕುಂತಳೆಯು ನಡೆದಿದ್ದಳು. ಪ್ರಿಯಂವದಾನಸೂಯೆಯರು ಈ ಮಾತನ್ನು ಕೇಳಿ ನಸುನಕ್ಕಿರಬಹುದು; ಗೌತಮಿಯು ಶಕುಂತಳೆಗೆ ಗಿಡಬಳ್ಳಿಗಳಲ್ಲಿದ್ದ ಪ್ರೇಮವನ್ನು ಹೊಗಳಿರಬಹುದು. ಹಾಗೆಯೆ ಕುಂಜಗಳ ಮರೆಯಲ್ಲಿ ಅಡಗಿದ್ದ ಪಾರವನು ಒಳಗೊಳಗೆ ಚಟಪಟಿಸಿರಬಹುದು.

ದುಷ್ಯಂತನಿಗೆ ಹಲವು ಕಾಲಗಳನಂತರ ಶಕುಂತಳೆಯೊಡನೆ ದೈವವಶಾತ್ ಸೇರುವಂತಾಗಿತ್ತು. ಆದರೆ ಆಕೆಯೊಡನೆ ತುಸು ಹೊತ್ತು ಇರುವಂತಾಗಲಿಲ್ಲ. ಮನುಷ್ಯನ ಆಶೆಗೆ ನೂರೆಂಟು ವಿಘ್ನಗಳು. ದುಷ್ಯಂತನು ಬಹಳ ದುಃಖಪಟ್ಟನು. ಆತನಿಗೆ ಲತಾಗೃಹವು ಶಕುಂತಳೆಯಿಲ್ಲದೆ ಶೂನ್ಯವಾಗಿದ್ದಿತು. ಹಾಗಿದ್ದರೂ ಅಲ್ಲಿಂದ ಹೊರಹೊರಡಲು ಆತನಿಗೆ ಕಾಲೇ ಬರಲಿಲ್ಲ. ಒಂದು ಕಡೆ ಆಕೆಯು ಹೊರಳಾಡಿ ಪುಡಿಯಾದ ಹೂದಳಿರ ಹಾಸು; ಇನ್ನೊಂದೆಡೆ ಪ್ರಿಯನಿಗೆಂದು ಬರೆದ ಬಾಡಿಹೋದ ಪ್ರೇಮಪತ್ರ; ಮತ್ತೊಂದೆಡೆ ಅವಳ ಕೈಯಿಂದ ಕೆಳಬಿದ್ದ ಹೂಮಾಲೆಯ ಆಭರಣ—ಇದನ್ನೆಲ್ಲ ಕಂಡು, ಆತನಿಗೆ ಲತಾಗೃಹವನ್ನು ಬಿಟ್ಟು ಹೊರಡುವ ಮನಸ್ಸಾಗಲಿಲ್ಲ. ಶಕುಂತಳೆಯ ಯಾವ ಯಾವ ವಾಗ್ವ್ಯಾಪಾರವೂ ಅಂಗವಿನ್ಯಾಸವೂ ತನ್ನನ್ನು ಮುಗ್ಧಗೊಳಿಸಿದ್ದವೊ,

ಅವುಗಳೆಲ್ಲ ತನಗಿನ್ನೊಮ್ಮೆ ಕೇಳಿಸಿದಂತಾಯಿತು; ಇನ್ನೊಮ್ಮೆ ಕಂಡಂತಾಯಿತು. ಆತನ ಮನಸ್ಸು ಶಕುಂತಳೆಯಲ್ಲಿ ನಟ್ಟುಹೋಯಿತು. ತಾನು ಮರುದಿವಸಕ್ಕೆ ರಾಜಧಾನಿಗೆ ಮರಳುವುದೆಂದು ಋಷಿಗಳಿಂದ ಅನುಜ್ಞೆಯನ್ನು ಪಡೆದಿದ್ದನು; ಇನ್ನು ಮುಂದೆ ಯಾವ ನೆವವಿಟ್ಟು ಆಶ್ರಮದಲ್ಲಿರಬಹುದೆಂದು ಬಹಳವಾಗಿ ಆಲೋಚಿಸಿದನು. ಆದರೆ ಯಾವ ಕಾರಣವೂ ಅತನಿಗೆ ಹೊಳೆಯಲಿಲ್ಲ.

ಇಷ್ಟು ಹೊತ್ತಿಗೆ ಆತನಿಗೆ ಋಷಿಗಳ ಕೂಗು ಕೇಳಬಂದಿತು. ಆಗ ಸಾಯಂಕಾಲದ ಹೋಮದ ಸಮಯವಾಗಿತ್ತು. ಹೋಮಕ್ಕೆ ವಿಘ್ನಗಳನ್ನು ತಂದೊಡ್ಡುತ್ತಿದ್ದ ರಾಕ್ಷಸರನ್ನೆಲ್ಲ ದುಷ್ಯಂತ ಮಹಾರಾಜನು ತನ್ನ ಧನುಷ್ಟಂಕಾರದಿಂದಲೇ ಓಡಿಸಿ ಬಿಟ್ಟಿದ್ದನು. ಆದರೆ, ತಿರಿಗೊಮ್ಮೆ ಮುನಿಗಳ ಕೂಗು! ತಿರಿಗೊಮ್ಮೆ ಕಣ್ವಾಶ್ರಮದ ವೈಖಾನಸರಿಗೆ ರಾಕ್ಷಸರ ಉಪಟಳ!! ಋಷಿಗಳ ಮೊರೆಯನ್ನು ಕೇಳಿ, ಅರಸನು ಬೆಚ್ಚಿಬಿದ್ದನು; ಹಗಲುಕನಸಿನಿಂದ ಎದ್ದುಬಿಟ್ಟನು. ತನಗಿನ್ನು ಕೊಂಚ ಕಾಲ ಆಶ್ರಮದಲ್ಲಿ ಉಳಿಯುವಂತಾಯಿತೆಂದು ಮನಗಂಡನು. ಕೂಡಲೆ ಆತನು ಕೈಯಲ್ಲಿದ್ದ ಧನುರ್ಬಾಣಗಳನ್ನು ಹಿಡಿದು ಆಶ್ರಮದತ್ತ ಯಜ್ಞರಕ್ಷಕನಾಗಿ ತೆರಳಿಬಿಟ್ಟನು.

---

# ೬. ಗಾಂಧರ್ವ ವಿವಾಹ




ವವು ಶಕುಂತಳೆಗೆ ಪ್ರತಿಕೂಲವೆಂದು, ಅದಕ್ಕೆ ತಕ್ಕ ಪರಿಹಾರ ಮಾಡಲು ಸೋಮತೀರ್ಥಕ್ಕೆ ತೆರಳಿದ ಕಣ್ವನಿನ್ನೂ ಹಿಂತಿರುಗಿದ್ದಿಲ್ಲ. ಆತನಿಲ್ಲದಿದ್ದುದರಿಂದ ಆಶ್ರಮದ ವೈಖಾನಸರ ಸಂಕಷ್ಟಗಳನ್ನು ಹೇಳಬರುತ್ತಿದ್ದಿಲ್ಲ. ಹೋಮಕ್ಕೆಂದು ಸಿದ್ಧರಾದೊಡನೆಯೆ, ಛಾಯಾರೂಪಿಗಳಾದ ರಾಕ್ಷಸರು ಯಾಗಗಳಿಗೆ ವಿಘ್ನಗಳನ್ನು ತಂದೊಡ್ಡುತ್ತಿದ್ದರು. ಆಶ್ರಮದಲ್ಲಿ ಕಣ್ವನಿದ್ದಾಗ ಅದರ ಬಳಿ ರಾಕ್ಷಸರ ಸಂಚಾರವೂ ಕೂಡ ಇರಲಿಲ್ಲ. ವೈಖಾನಸರು ದುಷ್ಯಂತಮಹಾರಾಜನಿಗೆ ಮೊರೆಯಿಟ್ಟು, ಅವನನ್ನು ಆಶ್ರಮದಲ್ಲಿ ಕೆಲ ದಿನಗಳನ್ನು ಕಳೆದು, ಕುಲಪತಿಯು ಬರುವಿಕೆಯನ್ನು ಇದಿರು ನೋಡಿದರು. ದುಷ್ಯಂತನೆಂದರೆ ಮಹಾ ಪರಾಕ್ರಮಶಾಲಿಯು. ಆತನ ಧನುಷ್ಟಂಕಾರಕ್ಕೆ ಹೆದರಿ, ರಾಕ್ಷಸರು ಪಲಾಯನ ಮಾಡಿದ್ದರು. ಆದರೆ, ತಿರಿಗೊಮ್ಮೆ ಅವರು ದ್ವಿಗುಣೋತ್ಸಾಹದಿಂದ ಮುನಿಗಳ ಯಾಗಗಳನ್ನು ಹಾಳು ಮಾಡಬೇಕೆಂಬ ಇಚ್ಛೆಯಿಂದ ಆಶ್ರಮದ ಬಳಿ ತಿರುಗಾಡಲು ಅನುವಾದರು. ದುಷ್ಯಂತನು ಊರಿಗೆ ತೆರಳಿರಬೇಕೆಂದು ಅವರು ಊಹಿಸಿರಬೇಕು. ಏಕೆಂದರೆ, ನಾಡಿನ ರಾಜನು ಆಶ್ರಮದಲ್ಲಿ ಹೆಚ್ಚು ಹೊತ್ತು ಇರಲಾಗದು. ಆದರೆ, ನಾಡಿನ ಪ್ರಜೆಗಳನ್ನು ಈತಿಭೀತಿಗಳಿಂದ ರಕ್ಷಿಸಿದಂತೆ ಕಾಡಿನ ಪ್ರಜೆಗಳನ್ನೂ ಅರಸನು ಕೈಲಾದಷ್ಟು ಸಾಕುವುದು ಧರ್ಮವಲ್ಲವೆ? ನಾಡಿನ ಪ್ರಜೆಗಳು ತಮ್ಮ ಉತ್ಪತ್ತಿಯಿಂದ ಸ್ವಲ್ಪಾಂಶವನ್ನು ಅರಸನಿಗೆ ಕಂದಾಯ ರೂಪವಾಗಿ ತೆರುವುದಾದರೆ, ಕಾಡಿನ ಋಷಿಗಳು ಜಪತಪೋನುಷ್ಠಾನಗಳಿಂದ ಗಳಿಸಿದ ಪುಣ್ಯದಲ್ಲಿ ಆರನೆಯೊಂದಶವನ್ನು ಅರಸನಿಗೆ ಬಿಟ್ಟುಕೊಡುವರೆಂದಾದ ಮೇಲೆ, ಅವರ ಆರೈಕೆಗೂ ಅರಸನು ಬಾಧ್ಯನಾಗಿದ್ದನು.

ಕಾಡಿಗೆ ಬೇಟೆಗೆಂದು ಬಂದವನಿಗೆ ವೈಖಾನಸರು ಆಶ್ರಮಕ್ಕೆ ಬಂದು, ರಕ್ಷಾಶಿಕ್ಷೆಗಳ ಪ್ರಭಾವವನ್ನು ನೋಡೆಂದಿದ್ದರು. ಪ್ರಾಯಶಃ ಪೂರ್ವ ಕಾಲಗಳಲ್ಲಿ ರಾಜ್ಯಗಳ ಗಡಿಪ್ರಾಂತಗಳಲ್ಲಿರುವ ಜನರು ಈಗಿನಂತೆ ಬಹಳ ಉಪದ್ರವಕಾರಿಗಳಾಗಿದ್ದರು. ಅವರು ಅರಸನ ಅಸ್ತ್ರಬಲಕ್ಕೂ ಸೈನ್ಯಬಲಕ್ಕೂ ಬೆದರುತ್ತಿದ್ದಿಲ್ಲ. ಆದರೆ, ಕಣ್ವನಂತಹ ಮಹಾಮಹಿಮರ ಆತ್ಮಬಲಕ್ಕೂ ತಪೋಬಲಕ್ಕೂ ಹೆದರುತ್ತಿದ್ದರು.

ದುಷ್ಯಂತ ಮಹಾರಾಜನು ಆಶ್ರಮದಲ್ಲಿ ಇನ್ನೂ ಕೆಲ ದಿನ ನಿಂತನು; ಇನ್ನೊಮ್ಮೆ ತನ್ನ ಧನುಸ್ಸನ್ನು ಜಗ್ಗಿ ಹಿಡಿದು, ರಾಕ್ಷಸರನ್ನೆಲ್ಲ ಓಡಿಸಿದನು. ಇನ್ನೊಮ್ಮೆ ಮುನಿಗಳ ಯಾಗನಿಮಿತ್ತವಾಗಿ ಛಾಯಾರೂಪಿಗಳಾದ ರಾಕ್ಷಸರ ಬೆಂಬತ್ತಿ, ಆತನು ಅವರಿಗೆ ತನ್ನ ಪ್ರಭಾವದ ಪರಿಚಯವನ್ನು ಮಾಡಿಸಿದನು.

ಸಾಯಂಕಾಲದಲ್ಲಿ ವಿಶ್ರಾಂತಿ ಸಿಕ್ಕಿದಾಗಲೆಲ್ಲ ಮಾಲಿನೀತೀರಕ್ಕೆ ತೆರಳಿ ದುಷ್ಯಂತನು ಹೂಬಿಸಿಲಲ್ಲಿ ವಿಹರಿಸುತ್ತಿದ್ದನು. ಅನಸೂಯಾ ಪ್ರಿಯಂವದೆಯರಿಂದ ಯುಕ್ತಳಾದ ಶಕುಂತಳೆಯೊಡನೆ ಮಾತನಾಡುತ್ತಿದ್ದನು. ಅವರ ಪ್ರೀತಿಯು ದಿನೇ ದಿನೇ ಪ್ರವರ್ಧಮಾನವಾಗಿತ್ತು. ಕಡೆಗೊಂದು ದಿನ ಅರಸನು ಶಕುಂತಳೆಯನ್ನು ಗಾಂಧರ್ವವಿವಾಹ ಮಾಡಿಕೊಂಡನು. ಆ ವಿವಾಹಕ್ಕೆ ಅಗ್ನಿದೇವತೆಯ ಸಾಕ್ಷ್ಯವು ಅಗತ್ಯವಿಲ್ಲ; ಬ್ರಾಹ್ಮವಿವಾಹದಲ್ಲಿ ಕನ್ಯೆಯನ್ನು ದೇವಾಗ್ನಿದ್ವಿಜಸನ್ನಿಧಿಯಲ್ಲಿ ದಾನಮಾಡಿಕೊಡುವ ಪದ್ಧತಿಯಿದೆ. ಆದರೆ, ಗಾಂಧರ್ವದಲ್ಲಿ ಸಾಕ್ಷಿಯೆಂದರೆ, ಹೊತ್ತಾರೆಯಿಂದ ಬೈಗಿಂಗೆ ನಭೋಮಂಡಲದಲ್ಲಿ ವಿರಾಜಿಸುವ ಸಾಕ್ಷಾತ್ ಸವಿತೃನಾಮಕ ಆದಿತ್ಯ ದೇವತೆ; ಮತ್ತು ಬೈಗಿಂದ ಹೊತ್ತಾರೆಗೆ ಅದೇ ನಭೋಮಂಡಲದಲ್ಲಿ ಮೂಡಿ ಬೆಳಗುವ ಸುಧಾಮಂಡಲಚಕ್ರವರ್ತಿಯಾದ ಚಂದ್ರದೇವತೆ. ಆದರೆ ಶಕುಂತಳಾದುಷ್ಯಂತರ ವಿವಾಹದಲ್ಲಿ ಒಂದು ವಿಶೇಷವಿದ್ದಿತು. ಇಷ್ಟರ ತನಕ ಶಕುಂತಳೆಯೆಂಬ ಹೊಸ ಸೃಷ್ಟಿಯ ಪರಿಚಯವನ್ನು ಚೆನ್ನಾಗಿ ಅರಸನಿಗೆ ಮಾಡಿ ಕೊಟ್ಟವರೆಂದರೆ ಪ್ರಿಯಂವದಾನಸೂಯೆಯರು. ಸೂರ್ಯಚಂದ್ರರಿಲ್ಲದಿದ್ದರೆ, ಸೃಷ್ಟಿಯೆಂತು ಕತ್ತ

ಲೆಯ ಗುಹೆಯಲ್ಲಿ ಹುದುಗಿರ ಬೇಕಾಗಿತ್ತು? ಹಾಗೆಯೇ ಸಖಿಯರಿಲ್ಲ ದಿದ್ದರೆ, ಶಕುಂತಳೆಯ ಸೌಂದರ್ಯವು ಅರಸನ ಕಣ್ಣಿಗೆ ಗೋಚರವಾಗು ತ್ತಿದ್ದಿಲ್ಲ. ಆದುದರಿಂದಲೆ ಶಕುಂತಳೆಯು ಹೊಸ ಸೃಷ್ಟಿಯೆಂದು ಹೇಳು ವಾಗ ಪ್ರಿಯಂವದಾನಸೂಯೆಯರು ಕಾಲನಿಯಾಮಕರಾದ ಸೂರ್ಯಾ ಚಂದ್ರಮಸರೆಂದು ಕಾಳಿದಾಸನೇ ಹೇಳಿರುವನು. ಅಂತಹವರನ್ನು ಸಾಕ್ಷ್ಯ ವಾಗಿಟ್ಟು, ಅರಸನು ಶಕುಂತಳೆಯನ್ನು ಮದುವೆಗೈದನು. ತಂದೆ ತಾಯ್ಗ ಳಿಲ್ಲದ ಕೂಸು ಋಷ್ಯಾಶ್ರಮದಲ್ಲಿ ಬಳೆದು, ಭಾರತದ ಮಹಾರಾಜ್ಞಿ ಯಾದಳು. ಆಶ್ರಮದ ಯಾವನೊಬ್ಬ ವೈಖಾನಸನಿಗಾಗಲಿ ಇನ್ನೊಬ್ಬನಿ ಗಾಗಲಿ ಕಾಡಿನ ಮರಿಗಿಳಿಯು ಅರಗಿಳಿಯಾಗಿತ್ತೆಂದು ಗೊತ್ತಾಗಲಿಲ್ಲ. ರೆಕ್ಕೆ ಬಲಿತ ಹಕ್ಕಿಯು ಗೂಡಿನಿಂದ ಹೊರನೆಗೆದು ಆಕಾಶಕ್ಕೆ ಹಾರಿ ಹೋಗುವಂತೆ, ಶಕುಂತಳೆಯು ಆಶ್ರಮವನ್ನು ಬಿಟ್ಟು ತೆರಳುವುದರಲ್ಲಿರುವ ಳೆಂದು ಅವರಾರಿಗೂ ತಿಳಿಯಲಿಲ್ಲ.

ಸಖಿಯರು ವಧೂವರರಿಗೆ ಮೃದುಹಾಸದ ಶೋಭನಗಳನ್ನು ಹಾಡಿ ದರು. ವನದೇವತೆಗಳು ದಂಪತಿಗಳಿಗೆ ಸುಖವಾಗಲೆಂದು ಹರಸಿದರು. 'ನಾಡಿನ ರಾಣಿಯೆ! ಕಾಡನ್ನು ಬಿಡುವೆಯ?' ಎಂದು ಪ್ರಿಯಂವದೆ ಯೆಂದಳು. 'ಇಲ್ಲದಿದ್ದರೆ, ಕಾಡು ನಾಡಾದೀತು,' ಎಂದು ಪ್ರಿಯನನ್ನು ಅಪಾಂಗದಿಂದ ಈಕ್ಷಿಸುತ್ತ ಶಕುಂತಳೆ ನಕ್ಕುಬಿಟ್ಟಳು. 'ಗೆಳೆಯ! ಗುರು ಜನವು ಅವಮಾನಿತವಾಗದಂತೆ ವರ್ತಿಸುವೆಯಲ್ಲವೆ?' ಎಂದು ಅನ ಸೂಯೆಯು ಅರಸನಿಗೆ ಕೇಳಿದಳು. ಶಕುಂತಳಾದುಷ್ಷಂತರ ಪ್ರೇಮ ವೆಂದರೆ ಒಂದಕ್ಕೊಂದು ಹಾಸುಹೊಕ್ಕಾಗಿತ್ತು. ಆದರೆ, ಅನಸೂಯೆಯ ಮನಸ್ಸು ಗೆಳತಿಯ ಮನಸ್ಸು; ಅದು ಅನಿಷ್ಟವನ್ನು . ಬಯಸುವುದಿಲ್ಲ; ಆದರೆ, ಅನಿಷ್ಟವಾಗದಂತೆ ಪ್ರಯತ್ನಿಸುತ್ತಿದ್ದಿತು.

ಶಕುಂತಳೆಯನ್ನು ರಹಸ್ಯವಾಗಿ ವಿವಾಹಮಾಡಿ ಅರಸನು ಕಣ್ವಾ ಶ್ರಮದಲ್ಲಿ ಕೆಲದಿನಗಳ ತನಕ ನಿಂತನು. ಶಕುಂತಳೆಗೆ ತನ್ನ ಪತಿಯಲ್ಲಿ ಅವಿಚಲಿತ ಪ್ರೇಮವಿದ್ದಿತು; ದುಷ್ಷಂತನಿಗೆ ತನ್ನ ಮಡದಿಯಲ್ಲಿ ಅನನ್ಯ ವಾದ ಪ್ರೀತಿಯಿದ್ದಿತು. ಅವರಿಬ್ಬರೂ ಮಾಲಿನೀತೀರದ ವೃಕ್ಷಗಳ

ಅಡಿಗಳಲ್ಲಿ ವಿಶ್ರಮಿಸಿ, ಅಲ್ಲಲ್ಲಿಯ ಲತಾಗೃಹಗಳಲ್ಲಿ ವಿಹರಿಸಿ, ತಮ್ಮನ್ನು ಪ್ರೇಮದಿಂದ ಬಂಧಿಸಿಕೊಂಡರು. ಆದರೆ, ಆತನಿಗೆ ರಾಜ್ಯದ ಭಾರವನ್ನು ಹೆಚ್ಚು ಹೊತ್ತು ಮಂತ್ರಿಗಳ ಭುಜಗಳ ಮೇಲಿರಿಸಿ ಕಣ್ವಾಶ್ರಮದಲ್ಲಿ ಉಳಿಯಲಾಗಲಿಲ್ಲ. ತಾಯಿಯು ಕೈಗೊಂಡ ವ್ರತದ ಪಾರಣೆಗೆ ಮಾಧವ್ಯ ನನ್ನು ತನ್ನ ಪ್ರತಿನಿಧಿಯನ್ನಾಗಿ ಕಳುಹಿಸಿದ್ದನು. ಅಲ್ಲಿಂದ ಪದೇ ಪದೇ ಕರೆಗಳು ಬರುತ್ತಿದ್ದುದರಿಂದ ಆತನಿಗೆ ನಿರ್ವಾಹವಿಲ್ಲದೆ ಹೊರಡಲೇ ಬೇಕಾಯಿತು. ಕಣ್ವನು ಸೋಮತೀರ್ಥದಿಂದ ಮರಳಿಲ್ಲವಾದರೂ ಆತ ನಿಂದ ತಾನು ಆಶೀರ್ವಾದವನ್ನು ಪಡೆದಿಲ್ಲವಾದರೂ ರಾಜಧಾನಿಗೆ ತೆರಳುವುದೆಂದು ಆತನು ನಿಶ್ಚಯಮಾಡಿದನು.

ತನ್ನ ಪ್ರಿಯನು ರಾಜಧಾನಿಗೆ ತೆರಳುವನೆಂದು ಕೇಳಿ ಶಕುಂತ ಳೆಯು ಕಣ್ಣೀರಿಟ್ಟಳು; ತಾನೂ ಸಂಗಡ ಬರುವೆನೆಂದಳು. ತಾನು ವಿವಾಹ ವಾದವಳನ್ನು ಮಹಾರಾಜ್ಞಿಗೆ ಒಪ್ಪುವ ವೈಭವದಿಂದ ಅರಮನೆಗೆ ಕರೆ ದೊಯ್ಯಬೇಕೆಂದು ದುಷ್ಯಂತನು ಇಚ್ಛಿಸಿದ್ದನು. ಯಾವ ವೈಭವವೂ ಇಲ್ಲದೆ, ಯಾವ ಅಟ್ಟಹಾಸವೂ ಇಲ್ಲದೆ ಶಕುಂತಳೆಯನ್ನು ರಾಜಧಾನಿಗೆ ಕರೆತರುವುದು ಆತನಿಗೆ ರುಚಿಸಲಿಲ್ಲ. ಆತನು ಶಕುಂತಳೆಯನ್ನು ಸಂತಯಿ ಸುತ್ತ, ಆಕೆಯ ಜೋಲು ಬಿದ್ದ ಮುಂಗುರಳನ್ನು ಮೇಲಕ್ಕೆ ಸವರಿ, ಆಕೆಯ ಜಿಡುಮುಡುವಿಗೆ ಹೂವಿಟ್ಟು, ಆಕೆಯ ಬೆರಳಿಗೆ ತನ್ನ ನಾಮಾಂ ಕಿತವುಳ್ಳ ವಜ್ರದುಂಗುರವನ್ನು ತೊಟ್ಟು, 'ಪ್ರಿಯೆ, ಇಂದು ನನ್ನನ್ನು ಹೋಗ ಗೊಡು. ಈ ಉಂಗುರದ ನಾಮಾಕ್ಷರಗಳಲ್ಲಿ ಒಂದೊಂದನ್ನೆ ದಿನಕ್ಕೊಮ್ಮೆ ಗಣಿಸು; ಹಾಗೆ ಗಣಿಸಿ ಮುಗಿಯುವುದರೊಳಗೆ ನಿನ್ನನ್ನು ಕರೆದೊಯ್ಯಲು ನನ್ನ ದೂತನು ಸಮಸ್ತ ಸೇನಾಯುಕ್ತನಾಗಿ ಬಂದು ಮುಟ್ಟುವನು' ಎಂದು ಅಭಯವಿತ್ತನು.

ದುಷ್ಯಂತ ಮಹಾರಾಜನು ಆಶ್ರಮದಿಂದ ರಾಜಧಾನಿಗೆ ಹೊರಡು ವಾಗ, ಆಶ್ರಮವಾಸಿಗಳೆಲ್ಲರೂ ಬಂದು ಅವನನ್ನು ಬೀಳ್ಕೊಟ್ಟರು. ವೈಖಾ ನಸರೆಲ್ಲರೂ ಆತನನ್ನು ಹರಸಿದರು. ಮುನಿಶಿಷ್ಯರೆಲ್ಲರೂ ಭಾರತದ ಮಹಾ ರಾಜನಿಗೆ ಜಯಗೀತವನ್ನು ಹಾಡಿದರು. ಋಷಿಕನ್ಯೆಯರೆಲ್ಲರೂ ಅರ

ಸನ ಮಸ್ತಕದ ಮೇಲೆ ಅರಳಮಳೆಗೈದು ಜಯಘೋಷವನ್ನು ಹಾಡಿದರು. ಪ್ರಿಯಂವದಾನಸೂಯೆಯರು ತಮ್ಮ ಗೆಳೆಯನನ್ನು ಬೀಳ್ಕೊಡುವುದಕ್ಕೆ ಮರೆಯಲಿಲ್ಲ. ಅವರ ಮುಖವು ಬಾಡಿದ್ದರೂ, ಮುಖದಲ್ಲಿ ಮೃದು ಹಾಸವು ಚಿಂತೆಗೆ ಗ್ರಾಸವಾಗಿದ್ದಿಲ್ಲ. ದುಷ್ಯಂತನು ಪ್ರಿಯಂವದಾನಸೂಯೆಯರನ್ನು ಕಂಡು ನಡೆಸಿದ ರಥದ ಕುದುರೆಗಳನ್ನು ನಿಲ್ಲಿಸಿ, 'ಹೋಗಿ ಬರುವೆನೆಂ'ದನು. ಅವರು ನಸುನಕ್ಕರು; ರಥವು ಮೆಲ್ಲನೆ ಮುಂದಕ್ಕೆ ನಡೆಯಿತು. ವೈಖಾನಸರು ತನಗಿತ್ತ ಆಶೀರ್ವಾದದ ಭಾರವನ್ನು ಹೊರಲಾರದವನಾದನೋ ಎಂಬಂತೆ ಅರಸನು ಚಿಂತಾಕ್ರಾಂತನಾಗಿ ಮುಖ ಬಗ್ಗಿಸಿದನು. ಶಕುಂತಳೆಯ ವಿವಾಹಗೈದು, ಹಿರಿಯರಿಗೆ ಆ ವಿಚಾರವನ್ನು ತಿಳಿಸದೆ ತಾನಿಂದು ಕಳ್ಳನಂತೆ ಓಡುತ್ತಿರುವೆನೆಂದು ಆತನು ಚಿಂತಿಸುತ್ತಿದ್ದಿರಬಹುದು; ಇಷ್ಟು ದಿವಸ ಮಾಲಿನಿಯ ತೀರದಲ್ಲಿ ಶಕುಂತಳೆಯೊಡನೆ ಕಳೆದ ದಿನಗಳನ್ನು ನೆನೆದು, ಆತನು ವ್ಯಥೆಗೀಡಾಗಿದ್ದಿರಬಹುದು. ಕಣ್ವಾಶ್ರಮದ ಸೃಷ್ಟಿಸೌಂದರ್ಯವು ಆತನ ಮನಸ್ಸಿಗೆ ಉಲ್ಲಾಸವನ್ನುಂಟು ಮಾಡಲಿಲ್ಲ. ಕಣ್ವಾಶ್ರಮದ ಮೃಗಪಕ್ಷಿಗಳು ಆತನ ಹೃದಯಕ್ಕೆ ಸಂತೋಷವನ್ನುಂಟುಮಾಡಲಿಲ್ಲ.

---

## ೭. ದುರ್ವಾಸನ ಆಗಮನ



ದುಷ್ಯಂತ ಮಹಾರಾಜನಿಂದ ವಿಯುಕ್ತಳಾದ ಶಕುಂತಳೆ ಆಧಾರತಪ್ಪಿದ ಬಳ್ಳಿಯಂತೆ ನೆಲಕ್ಕುರುಳಿದಳು; ಸಾಯಂಕಾಲವಾದೊಡನೆಯೆ ಸಹಚರನನ್ನು ಕಾಣದ ಚಕ್ರವಾಕಿನಿಯಂತೆ ಬಿಸುಸುಯ್ದಳು; ಸುರಿಯುವ ಮಂಜಿನಿಂದ ತುಂಬಿ ಬಳುಕುವ ಕುಮುದಿನಿಯಂತೆ ದುಃಖಿಸಿದಳು; ಮೃತ್ಯುವಿನ ಬಾಯಿಯಲ್ಲಿ ಸಿಲುಕಿಬಿಟ್ಟ ಚಿಗರಿಯ ಮರಿಯಂತೆ ಎಲ್ಲವನ್ನೂ ಮರೆತುಬಿಟ್ಟಳು.

ದುಷ್ಯಂತನು ರಥಾರೋಹಿಯಾಗಿ ರಾಜಧಾನಿಗೆ ನಡೆದೊಡನೆಯೆ ಶಕುಂತಳೆಗೆ ದುಷ್ಯಂತನಿಲ್ಲದ ಆಶ್ರಮವೆಲ್ಲ ಶೂನ್ಯವಾಯಿತು. ದುಷ್ಯಂತನನ್ನು ಕಾಣದೆ ಅವಳ ಕಣ್ಣು ಕುರುಡಾಯಿತು; ಆತನ ಮೋಹನಗಂಭೀರ ಮಾತುಗಳನ್ನು ಕೇಳದೆ ಕಿವಿ ಕಿವುಡಾಯಿತು. ಪಂಚೇಂದ್ರಿಯಗಳೆಲ್ಲ ನಿಸ್ತೇಜವಾಗಿ, ಅವಳು ಬಾಹ್ಯಪರಿಜ್ಞಾನಶೂನ್ಯಳಾಗಿ ದುಷ್ಯಂತನಲ್ಲಿ ತದೇಕಚಿತ್ತಳಾಗಿ ಮರವೆಯ ಗಬ್ಬದಲ್ಲಿ ಅಡಗಿಹೋದಳು; ಶೂನ್ಯತೆಯ ವಿಸ್ತಾರದಲ್ಲಿ ಲೀನವಾದಳು. ಆಶ್ರಮದ್ವಾರದ ಬಳಿಯಿದ್ದ ಮರದ ಛಾಯೆಯಲ್ಲಿ ತಳಿರ ಹಾಸಿಗೆಯ ಮೇಲೆ ತಲೆಗೆ ತೋಳನ್ನು ಇಂಬಿಟ್ಟು, ಮಲಗಿದಳು.

ಪ್ರಿಯಂವದಾನಸೂಯೆಯರು ಬಂದು, ವಿರಹದಿಂದ ದುಃಖಿಸುವ ತಮ್ಮ ಸಖಿಯನ್ನು ಸಮಾಧಾನಪಡಿಸಿದರು. ತಮ್ಮೊಡನೆ ಹೂದೋಟಕ್ಕೆ ಬಂದು ಹೂಗಳನ್ನು ಕೊಯ್ಯಬೇಕೆಂದು ಅವರು ಕೇಳಿಕೊಂಡರು. ಆದರೆ ಶಕುಂತಳೆಯು ತಡೆದು ಬರುವೆನೆಂದಳು. ಸಖಿಯರು ಆಕೆಗೆ ಮತ್ತೆ ಒತ್ತಾಯ ಮಾಡಲಿಲ್ಲ. ಆಕೆಯನ್ನು ಅವರು ಮತ್ತೊಮ್ಮೆ ಸಂತಯಿಸಿ

ಹೂಕೊಯ್ಯಲು ಹೂದೋಟಕ್ಕೆ ನಡೆವರು. ಶಕುಂತಳೆಯನ್ನು ಬಿಟ್ಟು ಹೊರನಡೆದವರಲ್ಲ; ಶಕುಂತಳೆಯನ್ನು ತೊರೆದು ಜೀವಿಸಿದವರಲ್ಲ. ಆದರೆ ಸಖಿಗಳು ಇಂದು ಶಕುಂತಳೆಯನ್ನು ಆಶ್ರಮದಲ್ಲೆ ಬಿಟ್ಟು ತೋಟಕ್ಕೆ ನಡೆದರು.

ಪ್ರಿಯಂವದಾನಸೂಯೆಯರು ಹೂಕೊಯ್ಯುತ್ತಿದ್ದಾಗ, ಅವರಲ್ಲಿ ಎಂದಿನಂತೆ ಪರಿಹಾಸವು ಕಾಣುತ್ತಿದ್ದಿಲ್ಲ. ಉತ್ತರವಾದಿತ್ವದ ಹೆದರಿಕೆಯು ಅವರ ಮನಸ್ಸಿನ ಮೇಲೆ ಕೂತುದರಿಂದ ಆ ಮನಸ್ಸು ಹತ್ತಿಯ ರೆಕ್ಕೆಯನ್ನು ಬಿಡಿಸಿ, ವಿನೋದ ಪ್ರಪಂಚದಲ್ಲಿ ತೇಲಿಹೋಗಲಿಲ್ಲ. ಶಕುಂತಳೆಯು ಸಮೀಪದಲ್ಲಿಲ್ಲದಿದ್ದರೂ ಅವಳ ಧ್ಯಾನವೇ ಅವರ ಚಿಂತೆಯಾಗಿತ್ತು. ಸೋಮತೀರ್ಥದಿಂದ ತಂದೆಯು (ಕಣ್ವನನ್ನು ಅವರು ತಂದೆಯೆನ್ನುತ್ತಿದ್ದರು.) ಹಿಂತಿರುಗಿದಾಗ ಈ ವೃತ್ತಾಂತವನ್ನು ಕೇಳಿ ಏನನ್ನುವನೋ ಎಂದು ಅವರು ಹೆದರಿದರು. ಅನುರೂಪನಾದವನಿಗೆ ಶಕುಂತಳೆಯನ್ನು ಮದುವೆಮಾಡಿಕೊಡಬೇಕೆಂದು ಆತನ ಸಂಕಲ್ಪವಿತ್ತು. ಈಗ ದೈವವೇ ಅದನ್ನು ಸಾಧಿಸಿ ತನ್ನನ್ನು ಕೃತಾರ್ಥನನ್ನಾಗಿ ಮಾಡಿದ್ದರಿಂದ ತಂದೆ ಕೋಪಿಸಲಿಕ್ಕಿಲ್ಲವೆಂದು ಅವರು ಊಹಿಸಿದರು. ತಮ್ಮನ್ನೆಲ್ಲರನ್ನು ನಂಬಿಸಿ, ಗಾಂಧರ್ವ ರೀತಿಯಿಂದ ಮದುವೆಯಾದ ಅರಸನಿಗೆ ಅಂತಃಪುರವನ್ನು ಹೊಕ್ಕನಂತರ ಕಾಡಗುಡಿಸಲ ನೆನಪುಳಿದೀತೇ ಎಂಬುದೂ ಅವರ ಮನಸ್ಸಿನ ಇನ್ನೊಂದು ಚಿಂತೆಯಿದ್ದಿತು. ಆದರೆ, ಮಹಾತ್ಮರು ತಮ್ಮ ಆಕೃತಿಗುಣಗಳಿಗೆ ವಿರುದ್ಧವಾಗಿ ನಡೆಯಲಾರರೆಂಬುದೇ ಅವರ ಮನಸ್ಸಿನ ವಿಶ್ವಾಸವಾಗಿತ್ತು. ಅಂತೂ ಯಾರೊಡನೆಯೂ ಕೇಳದೆ, ಸಖಿಗೆ ಅರಸನ ಕೈಹಿಡಿಯಲು ಅವರು ಉತ್ತೇಜನವನ್ನು ಕೊಟ್ಟಿದ್ದರು. ಅರಸನನ್ನು ಚೆನ್ನಾಗಿ ತಿಳಿದವರೂ ಅಲ್ಲ; ತಂದೆಯೆದುರು ನಿಲ್ಲಲು ಸಮರ್ಥರಾದವರೂ ಅಲ್ಲ.

ಪ್ರಿಯವಂದೆಯು ಹೀಗೆ ವಿಚಾರಿಸುತ್ತ ಹೂ ಕೊಯ್ಯುತ್ತಿದ್ದಳು. ಅನಸೂಯೆಯು ಹೂಮಾಲೆಯೊಂದನ್ನು ಕಟ್ಟುತ್ತಿದ್ದಳು. ಫಕ್ಕನೆ ಪ್ರಿಯಂವದೆಯ ಕೈಯಲ್ಲಿದ್ದ ಪುಷ್ಪಪಾತ್ರವು ಭೂಮಿಗೆ ಬಿದ್ದು ಹೂವೆಲ್ಲ ಚೆಲ್ಲಿಹೋಯಿತು; ಪುಷ್ಪಪಾತ್ರವು ಬಿದ್ದಿತೆಂದು ಅನಸೂಯೆ ಮುಖವೆತ್ತಿ

ದಾಗ ಆಕೆಯ ಹೂಮಾಲೆಯು ಕೈಯಿಂದ ಜಾರಿಹೋಯಿತು. ಆಗ ತಾನೆ ಶಕುಂತಳೆಯ ದುರ್ವಿಪಾಕದ ಮೂರ್ತಿಯು ಕಣ್ವಾಶ್ರಮವನ್ನು ಹೊಕ್ಕಿತು. ಶಕುಂತಳೆಯ ಪ್ರತಿಕೂಲ ದೈವಕ್ಕೆ ಪರಿಹಾರ ಮಾಡಬೇಕೆಂಬ ಉದ್ದೇಶದಿಂದ ಸಾವಿರಾರು ಮೈಲುಗಳ ಭೂಮಿಯನ್ನು ಕ್ರಮಿಸಿ ಕಷ್ಟ ಪಟ್ಟ ಮುನಿವರ್ಯನ ಪ್ರಯತ್ನಗಳನ್ನು ನಿಷ್ಫಲವನ್ನಾಗಿ ಮಾಡುವಂತಹ ದುರ್ವಾಸನ ಆಗಮನವು ಕಣ್ವಾಶ್ರಮಕ್ಕುಂಟಾಯಿತು. ದುರ್ವಾಸನೆಂಬ ಧೂಮಕೇತು ಶಕುಂತಳೆಯ ಭವಿಷ್ಯದಾಕಾಶದಲ್ಲಿ ಮೂಡಿಬಿಟ್ಟಾಗ ಅಪ ಶಕುನಗಳು ತೋರಿಬಂದುವು. ಪ್ರಿಯಂವದಾನಸೂಯೆಯರು, ಒಬ್ಬಳು ಇನ್ನೊಬ್ಬಳ ಮುಖವನ್ನು ದಿಟ್ಟಿಸಿ ಸುಮ್ಮನಾದರು.

ಕಣ್ವಾಶ್ರಮವೆಂದರೆ, ಅತಿಥಿಗಳಿಗೆ ಛತ್ರಶಾಲೆ. ದುರ್ವಾಸ ಮಹ ರ್ಷಿಯು ಆ ಮಾರ್ಗವಾಗಿ ದಾಟುವವನು ಕಣ್ವಮುನಿಗೆ ಸಂದರ್ಶನ ವನ್ನು ಕೊಟ್ಟು ತೆರಳುವೆನೆಂದು ಬಂದೇಬಿಟ್ಟನು. ದುರ್ವಾಸನು ಸುಲಭ ಕೋಪಿಯು; ಪ್ರಳಯಕಾಲದ ಸಿಡಿಲಿನೊಡನೆ ಹುಟ್ಟಿ, ಮಹಾರುದ್ರನ ತಾಂಡವದ ನೃತ್ಯಶಾಲೆಯಲ್ಲಿ ಬೆಳೆದು, ಮೂಗಿನ ಮೇಲೆ ಮುನಿಸಿಟ್ಟು ಹೋದಲ್ಲಿ ಬಂದಲ್ಲಿ, ಕುಳಿತಲ್ಲಿ ನಿಂತಲ್ಲಿ ಆರ್ಭಟಿಸಿ, ಮೂರು ಲೋಕ ಗಳನ್ನು ಗಡಗಡನೆ ನಡುಗಿಸಿದ ಪರಾಕ್ರಮಶಾಲಿಯು! ಸಮಯವೊದಗಿ ಬಂದರೆ, ಜಗತ್ತೆಲ್ಲವನ್ನೂ ಪುಡಿಗೈದು, ಪಿಂಡಮಾಡಿ, ಶ್ವಾನಸೂಕರಗಳಿಗೆ ಮೀನಮಕರಗಳಿಗೆ ತಿನ್ನಿಸಬೇಕೆಂದಿರುವ ಮಹಾಮಹಿಮನು! ಸರ್ವತಪಸ್ವಿ ಗಳಿಗೂ ಕ್ಷಮೆಯೆ ಮೂಲವಾದರೂ, ಪರರ ದೋಷಗಳನ್ನು ಕಂಡು, ಕೋಪಿಸಿ, ಕಣ್ಣಿದ್ದೂ ಕುರುಡನಾದವನೆಂದರೆ ತಾರಾಪತಿಯಾದ ಚಂದ್ರನ ಬೆನ್ನೊಳುದಿಸಿ ಅತ್ರಿಗೆ ಮಗನಾಗಿ ಹುಟ್ಟಿದ ದುರ್ವಾಸನು. ವಿಷವೃಕ್ಷವು ಜಟಾವಲ್ಕಲಗಳನ್ನು ಧರಿಸಿ ಲೋಕವಿನಾಶಕ್ಕೆ ನಿಂತಂತೆ, ದುರ್ವಾಸನು ಸನ್ಯಾಸಿಯಾಗಿಬಿಟ್ಟನು. ಹಾಗಿದ್ದರೂ ಈತನು ಪರಮಧಾರ್ಮಿಕನಾಗಿ ದ್ದನು. ಈತನಲ್ಲಿ ಧರ್ಮವೂ ಕ್ರೋಧವೂ ನೈಸರ್ಗಿಕ ವಿರೋಧವಿದ್ದ ನೀರೂ ಬೆಂಕಿಯೂ ಎಂಬಂತೆ ನೆಲೆಮಾಡಿದ್ದುವು.

ಇಂತಹ ಅಪೂರ್ವ ಮೂರ್ತಿಯು ಕಣ್ವಾಶ್ರಮಕ್ಕೆ ದಯಮಾಲಿಸಿ ದಾಗ, ಈ ಮಹಾಮಹಿಮನಿಗೆ ಸ್ವಾಗತವನ್ನೀಯಲು ಕಣ್ವನು ಇರಲಿಲ್ಲ;

ವೈಖಾನಸರೂ ತೋರಲಿಲ್ಲ. ಕಣ್ವನ ಭಗಿನಿ, ಆ ಗೌತಮಿಯು ಇಂದು ಅಲ್ಲಿರಲಿಲ್ಲ. ಶಕುಂತಳೆಯಲ್ಲದೆ ಮತ್ತಾರೂ ಕಾಣಲಿಲ್ಲ. ದುರ್ವಾಸನು ಹೊರಬಾಗಿಲಲ್ಲಿ ನಿಂತು 'ಜಯ ಮಹಾದೇವ ಶಂಕರ ಶಂಭೋ' ಎಂದು ಉದ್ಘೋಷಿಸಿದನು. ಆತನಿಗಾರೂ ಸ್ವಾಗತವನ್ನೀಯಲಿಲ್ಲ. ಆತನಿನ್ನೊಮ್ಮೆ 'ಅತ್ರಿಯ ಮಗನು ಅತಿಥಿಯಾಗಿ ಬಂದಿರುವನು' ಎಂದು ನಿವೇದಿಸಿದನು. ತನಗೆದುರು ಕಾಣುತ್ತಿದ್ದ ಲಲನೆಯೊಬ್ಬಳು ತನ್ನೆಡೆಗೆ ಚಿತ್ತವನ್ನು ಕೊಡದೆ ಇರುವುದನ್ನು ನೋಡಿ ದುರ್ವಾಸನು ಸಹಿಸಲಾರದಾದನು. ಪಾಪ! ವಿರಹವೇದನೆಯಿಂದ ಬಾಹ್ಯಜಗತ್ತನ್ನೇ ಮರೆತ ಶಕುಂತಳೆಯೇನು ತಿಳಿದಾಳು? ದುರ್ವಾಸನಿಗೆ ಸಿಟ್ಟೇರಿತು. ಆತ್ಮವಿದ್ಯೆಯೊಡನೆ ಆತನ ಭ್ರುಕುಟಿಯು ಕಪ್ಪಾಯಿತು. ಪಂಚೇಂದ್ರಿಯಗಳೊಡನೆ ಆತನ ಕಣ್ಣು ಕೆಂಪೇರಿತು; ಬೆವರ ಹನಿಗಳೊಡನೆ ಆತನ ತಪಸ್ಸು ಸಿಡಿಯಿತು; ಯಶಸ್ಸಿನೊಡನೆ ಆತನ ತುಟಿಗಳು ನಡುಗಿದವು. ಶಕುಂತಳೆಯ ಮನಸ್ಸನ್ನು ಕೊರೆಯುವ ಕೀಟವನ್ನು ದುರ್ವಾಸನು ತಿಳಿದು ರೋಷದಿಂದ ಶಾಪಜಲವನ್ನು ಕೈಯಲ್ಲಾಂತು, 'ಅಹಾ! ಅತಿಥಿಪರಿಭಾವಿನಿ! ಯಾರ ಮೇಲಿನ ಮೋಹದಿಂದ ಆಶ್ರಮದ ಹೊರಬಾಗಿಲಲ್ಲಿ ನಿಂತ ಈ ತಪೋಧನನನ್ನು ಗಣಿಸಲಾರದೆ ಹೋದೆಯಾ ಆತನು ನಿನ್ನನ್ನು ಮರೆತೇ ಹೋಗಲಿ', ಎಂದು ಶಾಪವಿತ್ತು ನಡೆದು ಬಿಟ್ಟನು.

ಹೂದೋಟದಲ್ಲಿದ್ದ ಸಖಿಯರಿಗೆ ಅತಿಥಿಯ ಗುಡುಗು ಕೇಳಿಸಿತು. ಗುಡುಗಿತೆನ್ನುವುದರಲ್ಲಿ ಮಿಂಚೂ ಹೊಳೆದಿದ್ದಿತು. ಹೊಳೆದ ಮಿಂಚು ಬಡಿಯಿತೆಂದೂ ಹೆದರಿದರು. ಅನಸೂಯೆಯು, ತಾನು ಸರಿಪಡಿಸುತ್ತಿದ್ದ ಹೂಮಾಲೆಯನ್ನು ಅಲ್ಲೇ ಬಿಸುಟು, ಪ್ರಿಯಂವದೆಗೆ ಅರ್ಘ್ಯಮಿಶ್ರವನ್ನು ತಯಾರಿಸೆಂದು ತಿಳಿಸಿ, ಆಶ್ರಮದ್ವಾರದತ್ತ ಓಡಿದಳು. ದುರ್ವಾಸನಾಗ ಬೇಗಬೇಗನೆ ಆಶ್ರಮಕ್ಕೆ ಬೆನ್ನಿಕ್ಕಿ ನಡೆಯುತ್ತಿದ್ದನು. ಅನಸೂಯೆಯು ಚಿಗರಿಯ ಮರಿಯಂತೆ ಹಾರಿ ಆತನ ಬೆಂಬತ್ತಿದಳು. ಮಹರ್ಷಿಯ ಕಾಲ್ಗೆರಗಿ ಸಖಿಯ ಅಪರಾಧವನ್ನು ಕ್ಷಮಿಸಬೇಕೆಂದು ಸೆರಗೊಡ್ಡಿ ಆತನೊಡನೆ ಬಿನ್ನವಿಸಿದಳು. ತಾನುಕೊಟ್ಟ ಪ್ರಸಾದವನ್ನು ಧಿಕ್ಕರಿಸಿದನೆಂಬ ಕೋಪದಿಂದ ಈತನು ಹಿಂದೊಮ್ಮೆ ಸ್ವರ್ಗದೊಡೆಯ

ನಾದ ಮಹೇಂದ್ರನ ಧನಕನಕವಸ್ತುವಾಹನಗಳೆಲ್ಲವೂ ಸಾಗರದ ಪಾಲಾಗುವಂತೆ ಶಪಿಸಿದ್ದನು. ಅನಂತರ ತಾನು ವೇದಪಾಠ ಮಾಡುತ್ತಿದ್ದಾಗ ತನ್ನ ಕಂಠವು ವಿಸ್ವರವಾದೊಡನೆ ನಕ್ಕುಬಿಟ್ಟ ಸರಸ್ವತೀದೇವಿಯನ್ನು ಭೂಮಿಯಲ್ಲಿ ಹುಟ್ಟುವಂತೆ ಶಪಿಸಿದ್ದನು. ಆತನು ಶಪಿಸಿದ ಸಂದರ್ಭಗಳು ಒಂದೆರಡಲ್ಲ; ನೂರಾರು. ದೋಷಕ್ಕೊಂದು ಕೋಪ; ಕೋಪಕ್ಕೊಂದು ಶಾಪ. ತಾನಾಡಿದ ಮಾತು ಸಟೆಯಾಗದೆಂದು ಮುನಿ ನಡೆದೇಬಿಟ್ಟನು. ಮೊದಲ ತಪ್ಪನ್ನು ಕ್ಷಮಿಸಬೇಕೆಂದು ಮುನಿಯ ಹಿಂದೆಯೇ ಅನಸೂಯೆ ಬಂದಳು. ಕಡೆಗೆ, ಬಿರುಮಳೆ ನಿಂತು ಶಾಂತಿಯುಂಟಾಗುವಂತೆ, ದುರ್ವಾಸನ ಪಾಷಾಣಹೃದಯವು ಕರಗಿತು. ಅನಸೂಯೆಯ ಮಾತು ಆತನಿಗೆ ಉಚಿತವೆಂದು ತೋಚಿತು. ಅಭಿಜ್ಞಾನದರ್ಶನದಿಂದ ತಾನು ಕೊಟ್ಟ ಶಾಪವು ವಿಮೋಚನೆಯಾಗುವುದೆಂದು ನುಡಿದು ಆತನು ಮುನ್ನಡೆದನು. ಅನಸೂಯೆಯು ಆಶ್ರಮಕ್ಕೆ ಬಂದು ತಮ್ಮಿಂದ ಸತ್ಕಾರವನ್ನು ಪಡೆಯಬೇಕೆಂದು ಬೇಡಿಕೊಂಡಳು. ಆದರೆ, ಆಶ್ರಮಕ್ಕೊಮ್ಮೆ ಬೆನ್ನುತೋರಿಸಿ, ತಿರಿಗೊಮ್ಮೆ ಮುಖವನ್ನು ತೋರಿಸಲಾರೆನೆಂದು ದುರ್ವಾಸನು ತನ್ನ ಹಾದಿಹಿಡಿದನು. ಹೇಗಿದ್ದರೂ ಅನಸೂಯೆಗೆ ಜೀವ ಬಂದಂತಾಯಿತು. ಅರಸನು ಶಕುಂತಳೆಯ ಬೆರಳಿಗಿಟ್ಟ ಉಂಗುರಿನ ನೆನಪು ಅವಳಿಗುಂಟಾಯಿತು. ನಡೆದುದೆಲ್ಲವನ್ನು ಆಕೆಯು ಪ್ರಿಯಂವದೆಗೆ ಅರುಹಿದಳು. ಕಠೋರವಾದ ಈ ವರ್ತಮಾನವನ್ನು ಶಕುಂತಳೆಗೆ ತಿಳುಹಿಕೊಟ್ಟು ಬಿಸಿನೀರಿನಿಂದ ಮಲ್ಲಿಗೆಯ ಬಳ್ಳಿಯನ್ನು ಪೀಡಿಸಬಾರದೆಂದು ಪ್ರಿಯಂವದೆಯೆಂದಳು. ಅನಸೂಯೆಯುದಕ್ಕೆ ಒಪ್ಪಿಕೊಂಡಳು. ತದನಂತರ ಅವರಿಬ್ಬರೂ ಶೂನ್ಯಹೃದಯಳಾದ ತಮ್ಮ ಸಖಿಯನ್ನು ಕಂಡರು. ಅವಳು ಆಗಲೂ ಬಾಹ್ಯಜಗತ್ತನ್ನೇ ಮರೆತಿದ್ದಳು. ಸಖಿಯರು ಶಕುಂತಳೆಯ ದುರದೃಷ್ಟಕ್ಕಾಗಿ ಬಹಳ ದುಃಖಿಸಿದರು; ಮನಸ್ಸಿನಲ್ಲೆ ಕೊರಗಿದರು.

---

# ೮. ಸಂದೇಶ



ಲೋಕವು ಸುಖದುಃಖಗಳೆರಡರಲ್ಲಿ ಇಡಲ್ಪಟ್ಟು ತೂಕವಾಗುತ್ತದೆಂದೂ ತಿರುಗಾಲಿಯಂತೆ ಸುಖದುಃಖಗಳೆರಡೂ ಕ್ರಮವಾಗಿ ಮೇಲ್ಕೆಳಗಾಗುವುವೆಂದೂ ಜನರು ಹೇಳುವುದುಂಟು. ಇಲ್ಲದಿದ್ದರೆ, ಸರಸಿಗಳ ತೀರದಲ್ಲಿ, ಮರಗಳ ಬುಡದಲ್ಲಿ, ಬೆಳ್ದಿಂಗಳ ತಂಪಿನಲ್ಲಿ ಶಕುಂತಳೆಯೊಡನೆ ವಿಹರಿಸಿ, ಒಂದು ವಾರದೊಳಗೆ ಅವಳನ್ನು ರಾಜಧಾನಿಗೆ ಕರೆದೊಯ್ಯುವೆನೆಂದು ನಂಬಿಸಿದ ಮಹಾರಾಜನು ಅಂತಃಪುರವನ್ನು ಸೇರಿದ ಮಾತ್ರಕ್ಕೇ ವನಾಂತರದಲ್ಲಿ ನಡೆದುದೆಲ್ಲವನ್ನು ಏಕೆ ಮರೆತುಬಿಡಬೇಕು? ಅಥವಾ ದುರ್ವಾಸ ಮಹರ್ಷಿಯ ಶಾಪದಿಂದಾಗಿಯೇ ದುಷ್ಯಂತ ಮಹಾರಾಜನು ತನ್ನ ಪ್ರಿಯೆಯನ್ನು ಮರೆಯುವಂತಾಯಿತೆ? ಹೇಗಿದ್ದರೂ ಕಣ್ವಾಶ್ರಮದ ಬಾಲೆ ಮೋಸದ ಬಲೆಯಲ್ಲಿ ಸಿಕ್ಕಿಬಿದ್ದಳು. ಮಿಡಿಮಿಡಿದ ಕಂಬನಿಯು ಅವಳ ತುಟಿಗಳ ಬಣ್ಣವನ್ನು ಕುಂದಿಸಿತು. ಸಂಸ್ಕಾರಲೋಪದಿಂದ ಅವಳ ಕುಡಿಗುರುಳು ಜೋಲುಬಿದ್ದು, ಮೋಡದ ಮರೆಯಲ್ಲಿದ್ದ ಕ್ಷೀಣಪ್ರಭೆಯ ಚಂದ್ರನಂತೆ ಅವಳ ಮುಖವು ದೀನವಾಯಿತು. ತನ್ನನ್ನು ಕರೆದೊಯ್ಯುವ ದೂತನನ್ನು ಪ್ರಿಯನು ಬೇಗನೇ ಕೊಟ್ಟು ಕಳುಹಿಸುವಂತಾಗಲೆಂದು ಕುಲದೇವತೆಗೆ ಅವಳು ಬಲಿಹರಕೆ ಹೊತ್ತಳು. ಆದರೆ, ದಿವಸಗಳ ಮೇಲೆ ದಿವಸಗಳು ಉರುಳಿದುವು. ಹಸ್ತಿನಾವತಿಯ ದೊರೆಯ ಸಮಾಚಾರವು ವನಾಂತರದ ಗಿಡಪೊದರುಗಳ ನಡುವೆ ಹುಲಿಕರಡಿಗಳ ಮಧ್ಯವಿದ್ದ ಕಣ್ವಾಶ್ರಮಕ್ಕೆ ಮುಟ್ಟಲಿಲ್ಲ.

ಶಕುಂತಳೆಯು ವಿರಹವ್ಯಥೆಯನ್ನು ಕಳೆಯಲೆಂದು ಒಮ್ಮೊಮ್ಮೆ ಕೈಯಲ್ಲಿ ವೀಣೆಯನ್ನು ಹಿಡಿದು, ತೊಡೆಯ ಮೇಲಿರಿಸಿ, ತಂತಿಗಳನ್ನು ಮೀಟಿ ದುಷ್ಯಂತ ಮಹಾರಾಜನ ಕೀರ್ತಿಯನ್ನು ಹಾಡುತ್ತಿದ್ದಳು. ಆದರೆ, ಕಣ್ಣಿಂದ ಸುರಿದ ನೀರು ವೀಣೆಯ ತಂತಿಗಳನ್ನು ಒದ್ದೆ ಮಾಡುತ್ತಿದ್ದುದ ರಿಂದ ವೀಣೆಯಲ್ಲಿ ಸ್ವರವುಂಟಾಗದೆ ಇರುತ್ತಿದ್ದು ಶಕುಂತಳೆಯು ತನ್ನ ದುಃಸ್ಥಿತಿಯನ್ನು ಚಿಂತಿಸಿ ಮೂರ್ಛಿತಳಾಗುತ್ತಿದ್ದಳು. ಕಳೆದ ದಿನಗಳನ್ನು ನೆನೆಸಿ, ದೇಹಲಿಯಲ್ಲಿಟ್ಟ ಪುಷ್ಪಗಳಿಂದ ಅವುಗಳನ್ನು ಗಣಿಸಿ, ಇನ್ನೂ ಹಸ್ತಿನಾವತಿಗೆ ತೆರಳಲು ತನಗೆ ವಿಧಿ ಬಗೆದಿಲ್ಲವೆಂದು ಶಕುಂತಳೆಯು ಹಲಬುತ್ತಿದ್ದಳು. ಗೌತಮಿಯೇ ಮೊದಲಾದ ಹಿರಿಯರಿಗೆ ಶಕುಂತಳೆ ಯೇಕಿಂತು ಬಡವಾಗುತ್ತಿದ್ದಳೆಂದು ತಿಳಿಯಲಿಲ್ಲ; ಅವಳೇಕೆ ಕೇಶಗಳನ್ನು, ಬಾಚಿ ಬೈತಲೆಯನ್ನೇಕೆ ಬಿಡಿಸುತ್ತಿದ್ದಿಲ್ಲವೆಂದು ಗೊತ್ತಾಗಲಿಲ್ಲ. ತನ್ನ ಉಡಿಗೆಯು ಮಲಿನವಾದರೂ ಈಕೆ ಅದರ ವಿಷಯ ಗಮನವನ್ನೇಕೆ ಕೊಡುವುದಿಲ್ಲವೆಂದು ಅವರಿಗೆ ಇನ್ನೊಂದು ಜಿಜ್ಞಾಸೆ ಇದ್ದಿತು. ಶಕುಂತ ಳೆಯ ಅವಸ್ಥೆಯು ಹೀಗಿರುತ್ತಿದ್ದಾಗ, ಕಣ್ವನಿನ್ನೂ ಆಶ್ರಮಕ್ಕೆ ಮರಳಿಲ್ಲ ವೇಕೆಂದು ಅವರು ಹಂಬಲಿಸುತ್ತಿದ್ದರು. ಶಕುಂತಳೆಯಾದರೊ, ಹಿಮದಿಂದ ಕೂಡಿದ ಕೌಮುದಿಯಂತೆ ಮ್ಲಾನಳಾಗಿದ್ದಳು.

ಸೋಮತೀರ್ಥಕ್ಕೆ ತೆರಳಿದ ಕಣ್ವ ಮಹರ್ಷಿಯು ಶಕುಂತಳೆಯ ಪ್ರತಿಕೂಲದೈವಕ್ಕೆ ಪರಿಹಾರಮಾಡಿ ಹಿಂತೆರಳಿದನು. ಕಣ್ವ ಮಹರ್ಷಿ ಯೆಂದರೆ, ತ್ರಿಕಾಲಜ್ಞಾನಿಯು. ಆತನು ತನ್ನ ಆಶ್ರಮವನ್ನು ಪ್ರವೇಶಿ ಸುತ್ತಿದ್ದಾಗ ತಾನೆ ಅಶರೀರವಾಣಿಯೊಂದು ಆತನಿಗೆ ಕೇಳಿಸಿತು. 'ಎಲೈ ಮಹರ್ಷಿಯೆ, ಯಾವಾಕೆಯನ್ನು ನೀನು ಮುದ್ದಾಡಿ ಸಲಹಿದೆಯೊ, ಆಕೆ ದುಷ್ಯಂತ ಮಹಾರಾಜನಿಂದ ಗರ್ಭತಳೆದು ಅಗ್ನಿಯೆ ಗರ್ಭದಲ್ಲಿದ್ದ ಶಮೀವೃಕ್ಷದಂತೆ ಪವಿತ್ರಳಾಗಿರುವಳು!' ಈ ಮಾತನ್ನು ಕೇಳಿದೊಡನೆಯೆ ಕಣ್ವನಿಗೆ ಪರಮ ಸಂತೋಷವಾಯಿತು. ತಾನಿಷ್ಟು ದಿವಸಗಳೂ ಜಪ ತಪೋನುಷ್ಠಾನಗಳನ್ನು ಬಿಟ್ಟು, ಸುಡುವ ಭೂಮಿಯಲ್ಲಿ ನಡೆದು, ಸೋಮತೀರ್ಥವನ್ನು ಸೇರಿ ಮಾಡಿದ ಕಾರ್ಯವು ಇಂದು ಫಲಿಸಿತೆಂದು

ಹಿಗ್ಗಿದನು. ಯಜ್ಞದಲ್ಲಿ ಆಹುತಿಯನ್ನು ಸುರಿಯುವಾಗ ಹೊಗೆಯೆದ್ದು ಕಣ್ಣು ಕಟ್ಟಿದರೂ, ಆ ಆಹುತಿಯು ಯಜ್ಞಕುಂಡದ ಮಧ್ಯದಲ್ಲಿಯೆ ಬಿದ್ದಿತೆಂದು ನಲಿದನು. ಲಜ್ಜೆಯಿಂದ ಮುಖತೋರಿಸದ ಮಗಳನ್ನು ಕಂಡು ಬಿಗಿದಪ್ಪಿ, ಕಣ್ಣೀರಧಾರೆಯಿಂದ ಕನ್ಯಾದಾನ ಮಾಡುವವನಂತೆ ಸಂತೋಷಾಶ್ರುಗಳನ್ನು ತಳಿದು, ಅವಳು ಮಾಡಿಕೊಂಡ ಗಾಂಧರ್ವವಿವಾಹಕ್ಕೆ ತನ್ನ ಸಮ್ಮತಿಯನ್ನು ಕೊಟ್ಟನು. ಶೀಘ್ರದಲ್ಲೆ ಪತಿಗೃಹಕ್ಕೆ ಕೊಟ್ಟು ಕಳುಹಿಸುವೆನೆಂದೂ ದುಃಖಿಸಬಾರದೆಂದೂ ಅವಳನ್ನು ಸಂತಯಿಸಿದನು. ಶಕುಂತಳೆಯಿನ್ನು ಆಶ್ರಮದ ಹುಡುಗಿಯಲ್ಲವೆಂದೂ ಭಾರತದ ಮಹಾರಾಜ್ಞಿಯೆಂದೂ ತಿಳಿದೊಡನೆಯೆ ಆಶ್ರಮವಾಸಿಗಳೆಲ್ಲರೂ ಬಂದು ಶಕುಂತಳೆಯನ್ನು ಕಂಡು ಮಾತನಾಡಿಸಿದರು; ಅವಳನ್ನು ಅಭಿನಂದಿಸಿದರು.

ಹಸ್ತಿನಾವತಿಗೆ ತೆರಳುತ್ತಿದ್ದ ಕೆಲವು ಋಷಿಗಳನ್ನು ನಿಲ್ಲಿಸಿ, ಅವರೊಡನೆ ಶಕುಂತಳೆಯನ್ನು ದುಷ್ಯಂತ ಮಹಾರಾಜನಲ್ಲಿಗೆ ಕೊಟ್ಟು ಕಳುಹಿಸುವುದೆಂದು ಕಣ್ವನು ನಿಶ್ಚಯಮಾಡಿದನು. ದಿನೇ ದಿನೇ ಅವಳು ವಿರಹವ್ಯಥೆಯಿಂದ ಬಡವಾಗುತ್ತ ಬರುತ್ತಿದ್ದಳು. ಆದುದರಿಂದ ಸಿಕ್ಕಿದ ಸಂದರ್ಭವನ್ನು ಬಿಡದೆ, ಶಕುಂತಳೆಯನ್ನು ಭಗಿನಿಯಾದ ಗೌತಮಿಯೊಡನೆಯೂ ತನ್ನ ಕೆಲವು ಶಿಷ್ಯರೊಂದಿಗೂ ಋಷಿಗಳ ಕೂಡೆ ಕಳುಹಿಸುವಂತೆ ಏರ್ಪಡಿಸಿದನು. ತಾನು ಸೋಮತೀರ್ಥದಿಂದ ಆಗತಾನೆ ಬಂದಿದ್ದುದರಿಂದ ಮತ್ತು ತಾನಿಲ್ಲದಿದ್ದರೆ ಆಶ್ರಮವು ಸುಸೂತ್ರವಾಗಿ ನಡೆಯಲಾರದುದರಿಂದ ಹಸ್ತಿನಾವತಿಗೆ ಹೋಗಲು ಆತನಿಗೆ ಮನಸ್ಸುಂಟಾಗಲಿಲ್ಲ. ಶಕುಂತಳೆಯು ಪತಿಗೃಹಕ್ಕೆ ಹೋಗುವಳೆಂದು, ಆಶ್ರಮದ ವಟುಗಳೆಲ್ಲ ಹೂದೋಟಕ್ಕೆ ಹೂದಳಿರನ್ನು ಕೊಯ್ಯಲು ನಡೆದರು. ಋಷಿಕನ್ಯೆಗಳಿಗೆ ಮೈತುಂಬ ಆಭರಣವೆಂದರೆ ನಿರ್ಗಂಧವಾದ ಲೋಹದ ವಿಕಾರಗಳಾಗಿದ್ದಿಲ್ಲ. ಕಣ್ಣಿಗೆ ಸುಂದರವಾಗಿಯೂ ಮೂಗಿಗೆ ಪರಿಮಳಯುಕ್ತವಾಗಿಯೂ ಮೈಗೆ ಮೆತ್ತಗಾಗಿಯೂ ಮನಸ್ಸಿಗೆ ಆಹ್ಲಾದಕರವಾಗಿಯೂ ಇರುವ ಹೂದಳಿರೇ ಅವರ ಆಭರಣಗಳಾಗಿದ್ದುವು. ವಟುಗಳು ಶಕುಂತಳೆಗೆಂದು ಹೂದಳಿರುಗಳನ್ನು ಸಂಗ್ರಹಿಸುತ್ತಿದ್ದಾಗ ವೃಕ್ಷ

ವೊಂದು ಶುಭ್ರವಾದ ವಸ್ತ್ರವೊಂದನ್ನು ವಟುಗಳೆದುರು ಚೆಲ್ಲಿಬಿಟ್ಟಿತು; ವಿಸ್ಮಿತರಾದ ವಟುಗಳು ಅದನ್ನು ಹೆಕ್ಕುತ್ತಿದ್ದಾಗ ಮಗುದೊಂದು ವೃಕ್ಷವು ವಸ್ತ್ರವಿನ್ನೊಂದನ್ನು ದಾನಮಾಡಿತು. ಮತ್ತೊಂದು ವೃಕ್ಷವು ಶಕುಂತಳೆಯ ಕೋಮಲ ಚರಣಗಳಿಗೆಂದು ಲಾಕ್ಷಾರಸವನ್ನು ಸುರಿಸಿತು. ಇನ್ನೊಂದು ವೃಕ್ಷವು ತನ್ನ ತಳಿರಿಗೆ ಸಾಟಿಯಾದ ಮತ್ತು ತನ್ನ ಹೂವುಗಳಿಗೆ ಸಮಾನ ವಾದ ಆಭರಣಗಳನ್ನು ಕೊಟ್ಟುಬಿಟ್ಟಿತು. ಇವುಗಳೆಲ್ಲವನ್ನು ಸಂಗ್ರಹಿಸಿ ವಟುಗಳು ಕಣ್ವನ ತಾಪಸಶಕ್ತಿಯ ಸಿದ್ಧಿಗೆ ಬೆರಗಾಗಿ ಗೌತಮಿಗೆ ಅವುಗಳನ್ನು ತಂದು ಒಪ್ಪಿಸಿದರು. ಅನಸೂಯಾಪ್ರಿಯಂವದೆಯರು ಇದೆಲ್ಲವೂ ಶಕುಂತಳೆಗೆ ರಾಜ್ಯಲಕ್ಷ್ಮಿಯು ತೋರಿಸಿದ ಪ್ರಸಾದವೆಂದು ಸಖಿಯನ್ನು ಉತ್ಸಾಹಗೊಳಿಸಿದರು. ಮತ್ತು ಅವರು ಅವಳಿಗೆ ಹೂ ಮುಡಿಸಲು ಕೂತುಕೊಂಡರು. ಇನ್ನು ಮುಂದೆ ಸಖಿಗಳಿಂದಿಂತಹ ಪ್ರೇಮದ ಸೇವೆಯು ತನಗೆ ದುರ್ಲಭವೆಂದು ಶಕುಂತಳೆಯು ತಿಳಿದಿದ್ದಳು. ಸಖಿಗಳು ಆಕೆಗೆ ಆಭರಣಗಳನ್ನು ಕೊಡುತ್ತಿದ್ದಾಗ ಆಶ್ರಮವಾಸಿ ಸ್ತ್ರೀಗಳು ಒಬ್ಬೊಬ್ಬರಾಗಿಯೆ ಬಂದು, ಅವಳಿಗೆ ಕುಂಕುಮದ ಬೊಟ್ಟನ್ನಿಟ್ಟು, ಸಿಂಧೂರದ ಲೇಪವನ್ನು ಹಚ್ಚಿ, ಕಜ್ಜಲದ ರೇಖೆಯನ್ನೆಳೆದು, ಹೂವನ್ನು ಮುಡಿಸಿ, ಹರಸಿದರು. ವೀರಪ್ರಸವಿನಿಯಾಗುವೆಯೆಂದು ಮುದಿತಾಪಸಿ ಯೊಬ್ಬಳು ಹರಸಿದಳು. ಗಂಡನಿಗೆ ಬಹುಮತಳಾಗುವೆಯೆಂದು ಇನ್ನೊ ಬ್ಬಳು ಆಶೀರ್ವದಿಸಿದಳು. ಅನಂತರ ಎಲ್ಲರೂ ಪ್ರಸ್ಥಾನಮಂಗಲ ವನ್ನು ಬಯಸಿ, ಶಕುಂತಳೆಯ ಗುಣಗಳನ್ನು ನೆನೆನೆನೆದು ತಂತಮ್ಮ ಕುಟೀರಗಳತ್ತ ನಡೆದರು.

ಶಕುಂತಳೆಗೆ ಪತಿಯನ್ನು ಸದ್ಯದಲ್ಲಿಯೆ ಕಾಣುವೆನೆಂಬ ಸಂತೋ ಷವು ಮನಸ್ಸನ್ನು ಹುರಿದುಂಬಿಸುತ್ತಿದ್ದರೂ ತಾನಿಷ್ಟು ಕಾಲವೂ ಬಳೆದು ಬಂದ ಆಶ್ರಮವನ್ನು ಬಿಡಬೇಕಾಯಿತೆಂದು ಅವಳು ಕೊರಗಿದಳು. ತನ್ನನ್ನು ಪ್ರೀತಿಯಿಂದ ಲಾಲಿಸಿ ಪಾಲಿಸಿ ಸಲಹಿದ ತಂದೆಯನ್ನು ಬಿಟ್ಟು ನಡೆಯ ಬೇಕು. ಆಶ್ರಮದ ಸುತ್ತಲೂ ನೀರೆರೆದು ಬೆಳೆಯಿಸಿ, ಗಂಡನೆಂದು ಹೆಂಡತಿ ಯೆಂದು ಅಕ್ಕನೆಂದು ತಮ್ಮನೆಂದು ಅಜ್ಜನೆಂದು ಅಜ್ಜಿಯೆಂದು ಸಂತಸ ಗೊಂಡು ಬೆಳೆಸಿದ ಹೂ ಬಳ್ಳಿಗಳನ್ನು ಹಿಂದಕ್ಕೆ ಬಿಟ್ಟು ನಡೆಯಬೇಕು.

ವಿಸ್ತಾರವಾದ ತನ್ನ ನಯನಗಳಿಂದ ಮನಸ್ಸನ್ನು ಮೋಹಿಸಿ, ವಿಸ್ತಾರವಾದ ತನ್ನ ಹೃದಯದಲ್ಲಿ ನೆಲೆಗೊಟ್ಟು, ಎಂತಹವರನ್ನೂ ಮುಗ್ಧಗೊಳಿಸಿ, ಆಶ್ರಮಕ್ಕೆ ಅತಿಥಿಗಳು ಆವಾಗಲೂ ಬಂದು ನಿಲ್ಲುವಂತೆ ಮಾಡಿ ಆಶ್ರಮದ ಅಯಸ್ಕಾಂತಗಳಂತಿದ್ದ ಹುಲ್ಲೆಗಳನ್ನು ಬಿಟ್ಟಗಲಬೇಕು. ಮಾತು ಕಲಿಸಿದ ಹಕ್ಕಿಗಳನ್ನು ಮಾತಾಡಿಸಿ, ಅಂತಹ ಪುಣ್ಯವಿರದಿದ್ದರೂ 'ತಿರಿಗೊಮ್ಮೆ ಮಾತಾಡಲು ಬರುವೆನು' ಎಂದು ಉಪಚಾರಕ್ಕೆ ಹುಸಿಯಾಡಿ ಬಿಟ್ಟಗಲಬೇಕು. ಆಶ್ರಮದ ಸಮಸ್ತ ತರುಲತೆಗಳ, ಮೃಗಪಕ್ಷಿ ಕೀಟಗಳ ನರನಾಡಿಗಳಲ್ಲಿ ಹರಿಯುತ್ತಿದ್ದ ತನ್ನ ಸ್ನೇಹಮಯವಾದ ಹೃದಯವನ್ನು ಆಶ್ರಮದಲ್ಲಿ ಬಿಟ್ಟು ಹಸ್ತಿನಾವತಿಯರಾಜನ ಮನೆಗೆ ತಾನು ಮಾರಿದ ಪ್ರೇಮವನ್ನು ಒದಗಿಸುವದಕ್ಕೆ ಹೊರಟಾಗ ಅವಳ ಕಣ್ಣಲ್ಲಿ ನೀರು ತುಂಬಿತು. ಕಾಲು ಮುನ್ನಡೆಯಲಿಲ್ಲ.

ಕಣ್ವನೇನೋ ವಿರಕ್ತನು; ಮಹಾತ್ಯಾಗಶಾಲಿಯು. ಆದರೆ ತಂದೆ ತಾಯಿಗಳು ತಮಗೆ ಬೇಡವೆಂದು ತೊರೆಯ ದಡದಲ್ಲಿ ತೊರೆದ ಮಗು ವನ್ನು ಹಕ್ಕಿಗಳಿಂದ ಬಿಡಿಸಿ ತಂದು ಇಷ್ಟು ವರ್ಷವೂ ಲಾಲಿಸಿ ಪಾಲಿಸಿ ಮಗಳನ್ನೀಗ ಬೀಳ್ಕೊಡುವಾಗ ಆತನ ಕೊರಳು ಬಿಗಿಯಿತು; ಕಣ್ಣಲ್ಲಿ ನೀರು ತುಂಬಿತು. ಹಾಗೆಂದು ಮಂಗಲಕಾಲದಲ್ಲಿ ಕಣ್ಣೀರಿಡುವುದು ಅಶುಭವೆಂದು ಕಣ್ಣೀರನ್ನು ತಡೆದುದರಿಂದ ಆತನ ಕಂಠವು ಉಮ್ಮಳಿ ಸಿತು. ಮಾತು ಗದ್ಗದವಾಯಿತು. ಇಂದ್ರಿಯಗಳೆಲ್ಲ ಹೃದಯದ ಅನಿರ್ವಚನೀಯವಾದ ಕಳವಳದಿಂದ ಜಡವಾಗಿ ವಿಷಯಗ್ರಹಣದಲ್ಲಿ ಮೂಕವಾಗಿ ಬಿಟ್ಟವು. ಕಡಿನಲ್ಲಿ ವಾಸಮಾಡುವ ಯತಿಯೊಬ್ಬನಿಗೆ ಇಂತು ದುಃಖವಾಗುವುವಾದರೆ ಮನೆಮಾರು ಕಟ್ಟಿ, ಸಂಸಾರಬಂಧದಲ್ಲಿ ಬಿದ್ದ ಗೃಹಸ್ಥರು ತಮ್ಮ ಮಕ್ಕಳಗಲುವಾಗ ಹೇಗೆ ದುಃಖಿಸುವರೋ ಹೇಳಬರುವುದಿಲ್ಲ.

ಕಣ್ವನು ಬಂದನೆಂದು ಶಕುಂತಳೆಯೆದ್ದು ತಂದೆಗೆ ನಮಸ್ಕರಿಸಿದಳು. 'ವತ್ಸೆ, ಶರ್ಮಿಷ್ಠೆಯಂತೆ ಗಂಡನ ಪ್ರೀತಿಗೆ ಪಾತ್ರಳಾಗಿ ಚಕ್ರವರ್ತಿಯಾಗಲುಳ್ಳ ಮಗನನ್ನು ಪಡೆಯು' ಎಂದು ಮಗಳನ್ನು ಕಣ್ವನು

ಹರಸಿದನು. ಸಮೀಪದಲ್ಲಿಯೆ ನಿಂತ ಗೌತಮಿಯು ಇದು ಕೇವಲ ಆಶೀರ್ವಾದವಲ್ಲವೆಂದೂ ಮಹಾವರಪ್ರಸಾದವೆಂದೂ ಶಕುಂತಳೆಗೆ ಸೂಚಿಸಿದಳು. ಏಕೆಂದರೆ, ಮಹಾತ್ಮರಾದವರು ಆಡಿದ ಮಾತುಗಳ ಹಿಂದೆಯೆ ಅರ್ಥವು ಅನುಸರಿಸುವುದು. ಆದರೆ ಉಳಿದವರು ಅರ್ಥಕ್ಕನುಸಾರವಾಗಿ ಹರಸುವವರು.

ಹೋಮಾಗ್ನಿಯು ಸದ್ಯೋಹುತವಾದುದರಿಂದ ದಳ್ಳುರಿಯುತ್ತಿತ್ತು. ಶಕುಂತಳೆಯು ಹೋಮಾಗ್ನಿಗೆ ಪ್ರದಕ್ಷಿಣೆ ಬಂದಳು. ಕಣ್ವನು ಅವಳ ಹಿಂದಕ್ಕೆಯೆ ನಡೆದು, ಋಗ್ವೇದದ ಪವಿತ್ರವಾದ ಮಂತ್ರಗಳನ್ನುಚ್ಚರಿಸಿ ವಧುವಿನ ಸಮಸ್ತ ದುರಿತವು ಶಾಂತವಾಗಿ ವೈತಾನಾಗ್ನಿಯು ಪಾವನಗೊಳಿಸಲೆಂದು ಪ್ರಾರ್ಥಿಸಿದನು. ಅನಂತರ, ಶಾರ್ಙ್ಗರವನನ್ನು ಕರೆದು ಋಷಿಗಳೊಡನೆ ಹಸ್ತಿನಾವತಿಗೆ ತೆರಳೆಂದು ಆಜ್ಞಾಪಿಸಿದನು. ಶಾರ್ಙ್ಗರವನು ಕಣ್ವನ ಶಿಷ್ಯರಿಗೆ ಹಿರಿಯನಾಗಿದ್ದು, ವಿಶ್ವಾಸಪಾತ್ರನಾಗಿದ್ದನು. ಆತನು ಗುರುವಿನಾಜ್ಞೆಯನ್ನು ಶಿರಸಾವಹಿಸಿ, ತಂಗಿಗೆ ಮಾರ್ಗದರ್ಶಕನಾಗಿ ನಡೆದನು. ಎಲ್ಲರೂ ಶಕುಂತಳೆಯನ್ನು ಬಿಟ್ಟುಬರಲು ಹೊರಟರು.

'ಅಪ್ಪಾ, ನೀರೆರೆದು ಬೆಳೆಸಿದ ಹೂಗಿಡಗಳನ್ನು ಬೀಡಬೇಕಾಯಿತಲ್ಲ?' ಎಂದು ಶಕುಂತಳೆಯು ತಂದೆಯೊಡನೆ ಬಿಕ್ಕಿ ಬಿಕ್ಕಿ ಅತ್ತಳು. 'ಮಗೂ, ಗಂಡನ ಮನೆಗೆ ಹೋಗುತ್ತಿರುವೆಯೆಂದು ವನದೇವತೆಗಳು ಕೋಪಿಸುವುದಿಲ್ಲ,' ಎಂದು ಮಗಳನ್ನು ಕಣ್ವನು ಸಂತಯಿಸಿದನು. ಆತನು ಮತ್ತೆ ಒಂದು ಹಜ್ಜೆ ಮುಂದಕ್ಕಿಟ್ಟು, ದಿಗಂತದ ವರೆಗೂ ವಿಸ್ತರಿಸಿದ ಆಶ್ರಮದ ವೃಕ್ಷಗಳನ್ನು ಕಂಡು, ಶಕುಂತಳೆಯ ಬೆನ್ನಿನ ಮೇಲೆ ಕೈಯಿಟ್ಟು, 'ಎಲೈ ಆಶ್ರಮದ ತರುಲತೆಗಳಿರ! ಯಾವಾಕೆ ನಿಮಗೆ ನೀರೆರೆಯದೆ ತಾನು ನೀರ್ಕುಡಿಯುತ್ತಿದ್ದಿಲ್ಲವೊ, ಯಾವಾಕೆ ಸಿಂಗರದಲ್ಲಿ ಆಶೆಯುಳ್ಳವಳಾದರೂ ಸ್ನೇಹವಶಳಾಗಿ ನಿಮ್ಮ ಚಿಗುರೆಲೆಗಳನ್ನು ಕೊಯ್ಯುತ್ತಿದ್ದಿಲ್ಲವೊ, ಯಾವಾಕೆ ನಿಮ್ಮಲ್ಲಿ ಹೂ ಕಂಡೊಡನೆ ಆನಂದದಿಂದ ನರ್ತಿಸುತ್ತಿದ್ದಳೊ, ಆ ಶಕುಂತಳೆಯಿಂದು ಪತಿಗೃಹಕ್ಕೆ ಹೊರಟಿರುವಳು. ನೀವೆಲ್ಲರೂ ಅನುಜ್ಞೆಯನ್ನು ದಯಪಾಲಿಸುವಿರಲ್ಲವೆ?' ಎಂದು ಗಂಭೀರವಾಗಿ

ನಿವೇದಿಸಿದನು. ಅವನ ಮಾತು ವನಗುಹೆಗಳಲ್ಲಿ ಪ್ರತಿಧ್ವನಿಯನ್ನಿತ್ತು, ವನದೇವತೆಗಳಿಗುಂಟಾದ ಮರುಕದೊಡನೆ ಸೇರಿ ದೀರ್ಘವಾಗಿ, ಬೆಟ್ಟದಿಂದ ಬೆಟ್ಟಕ್ಕೆ ಹರಿದೋಡಿತು. ಮರಗಿಡಗಳು ತಮ್ಮ ಮುದಿಯೆಲೆಗಳನ್ನುದುರಿಸಿ ಕಂಬನಿಯಿಡುವಂತೆ ಗೋಳಿಟ್ಟುವು. ಬಳ್ಳಿಗಳು ಶಕುಂತಳೆಯನ್ನು ಅಪ್ಪಿಕೊಳ್ಳುವಂತೆ ಕುಡಿಗೈಗಳನ್ನು ಚಾಚಿದುವು. ಹೂಗಳನ್ನರಳಿಸಿ, ಶಕುಂತಳೆಯ ಮಸ್ತಕದ ಮೇಲೆ ಅಲರ ಮಳೆಯನ್ನು ಸುರಿದುವು. ಹಣ್ಣುಗಳನ್ನು ಬೀಳಿಸಿ, ಶಕುಂತಳೆಗೆ ಅರ್ಘ್ಯವನ್ನಿತ್ತುವು. ಮರದ ತಳಿರೆಡೆಯಲ್ಲಿ ಅವಿತು, ಶಕುಂತಳೆಯನ್ನು ನೂರಾರು ಬಾರಿ ಮರದಿಂದ ಮರಕ್ಕೆ ತನ್ನನ್ನು ಹುಡುಕಾಡಿಸಿದ ಕಿನ್ನರಕಂಠದ ಕೋಗಿಲೆಯು ಸಮಸ್ತ ಬಂಧುವೃಕ್ಷಗಳ ಪರವಾಗಿ, ಅಖಿಲಪಕ್ಷಿಬಂಧುಗಳ ಕಡೆಯಾಗಿ, ಶಕುಂತಳೆಗೆ ಗಂಡನ ಮನೆಗೆ ತೆರಳಲು ಅನುಜ್ಞೆಯನ್ನೀಯುತ್ತ ಪ್ರಸ್ಥಾನಕಾಲದಲ್ಲಿ ಹಾಡಿ ಮುದಗೊಳಿಸಿತು. 'ಶಕುಂತಳೆ! ತಾವರೆಯ ಕೊಳಗಳಿಂದ ರಮ್ಯವಾಗಿ, ಛಾಯಾದ್ರುಮಗಳಿಂದ ತಂಪಾಗಿ, ನೀನು ನಡೆಯುವ ಮಾರ್ಗವು ಕ್ಷೇಮಕರವಿರಲಿ! ಕಮಲಪರಾಗಯುಕ್ತನಾದ ಮಂದಮಾರುತನು ನಿನಗನುಕೂಲವಾಗಿ ಬೀಸುತ್ತಿರಲಿ.' ಕೋಗಿಲೆಯು ಹಾಡಿದ ಈ ಹಾಡನ್ನು ಕೇಳಿ, ಸರ್ವರೂ ವಿಸ್ಮಿತರಾದರು. ಶಕುಂತಳೆಯು ತಲೆಬಾಗಿ, ತನಗೆ ಅನುಮತಿಯನ್ನಿತ್ತ ವನದೇವತೆಗಳಿಗೆ ವಂದಿಸಿದಳು. ಸಮೀಪದಲ್ಲಿಯೆ, ತಾನು ಬೆಳೆಸಿ ಮಾವಿನಮರಕ್ಕೆ ಮದುವೆ ಮಾಡಿಕೊಟ್ಟ ವನಜ್ಯೋತ್ಸ್ನೆಯನ್ನು ಕಂಡು, 'ಮಗಳೆ, ಹೋಗಿ ಬರುವೆನು. ಗಂಡನೊಡನೆ ಕೂಡಿದ್ದರೂ ನನ್ನನ್ನು ಆಲಿಂಗಿಸು', ಎಂದು ವನಜ್ಯೋತ್ಸ್ನೆಯೆಡೆಗೆ ನಡೆದು ಅಲ್ಲೆ ನಿಂತುಬಿಟ್ಟಳು. ಚೂತನೊಡನೆ ಸೇರಿದ ಲತೆಯನ್ನು ಕಂಡು, ದುಷ್ಯಂತನೊಡನೆ ವಿವಾಹವಾದ ತನ್ನ ಮಗಳನ್ನು ಕುರಿತು ಕಣ್ವನು, 'ವತ್ಸೆ, ನನ್ನೆಣಿಕೆಯಂತೆ, ನೀನು ಆತ್ಮಸದೃಶನಾದ ಗಂಡನನ್ನು ಹೊಂದಿದೆ. ಈ ವನಜ್ಯೋತ್ಸ್ನೆಯೂ ನಿನ್ನಂತೆಯೆ ಅನುರೂಪನಾದ ವರನನ್ನು ಪಡೆದಿರುವಳು. ನಿಮ್ಮಿಬ್ಬರ ವಿಷಯದಲ್ಲಿ ನಾನು ನಿಶ್ಚಿಂತನು,' ಎಂದು ಹೊಗಳಿದನು. ಕಣ್ವನು ಸೋಮತೀರ್ಥಕ್ಕೆ ಹೋಗಿದ್ದಾಗಲಷ್ಟೆ ಶಕುಂತಳೆಯು ದುಷ್ಯಂತನೊಡನೆ ಗಾಂಧರ್ವವಿವಾಹವಾದಳು; ವನಜ್ಯೋತ್ಸ್ನೆಯೂ ಚೂತನೊಡನೆ ಸ್ವಯಂ

ವರ ಮಾಡಿಕೊಂಡಳು. ಕಣ್ವನು ಹೆಗ್ಗಳಿಕೆಯಿಂದ ತಮ್ಮಿಬ್ಬರನ್ನು ಪ್ರಶಂಸಿಸುವಾಗ ಶಕುಂತಳೆಯು ತನ್ನ ಲತಾಭಗಿನಿಯ ಶಾಖೆಗಳನ್ನು ಮುಟ್ಟಿ, ತಳಿರಿಗೆ ಮುದ್ದಿಟ್ಟು, ಅದರಾರೈಕೆಯನ್ನು ಮಾಡಬೇಕೆಂದು ತನ್ನ ಸಖಿಯರಾದ ಅನಸೂಯಾಪ್ರಿಯಂವದೆಯರಿಗೆ ಪ್ರಾರ್ಥಿಸಿದಳು. ಆಗ ಸಖಿಯರು ಕಣ್ಣಲ್ಲಿ ನೀರು ತಂದು, 'ನಮ್ಮ ಆರೈಕೆಯನ್ನು ಯಾರು ನೋಡುವರು?' ಎಂದು ಅತ್ತು ಬಿಟ್ಟರು. ಶಕುಂತಳೆಯನ್ನು ಸಂತಯಿಸಬೇಕಾದವರೀ ಸಖಿಗಳೇ ಹೀಗೆ ಅಳುವುದೇ ಎಂದು ಕಣ್ವನು ಸೂಚನೆಯನ್ನು ಕೊಟ್ಟನು.

ತಡವಾಗುತ್ತಿದ್ದುದರಿಂದ ಶಕುಂತಳೆಯು ಮುನ್ನಡೆದಳು. ತಾನು ಮೈಮುಟ್ಟಿ ಬೆಳೆಸಿ ರಕ್ಷಿಸಿದ ಹೆಣ್ಣು ಜಿಂಕೆಯು ಮೆಲ್ಲನೆ ಸಂಚರಿಸುವುದು ಆಕೆಗೆ ಗೋಚರವಾಯಿತು. ಆ ಜಿಂಕೆಯು ಕಣ್ವಾಶ್ರಮದ ಪರ್ಯಂತವನ್ನು ಬಿಟ್ಟು ಹೊರಗೆ ನಡೆದುದಲ್ಲ. ಅದು ಗರ್ಭಿಣಿಯಾದುದರಿಂದ ಮೆಲ್ಲಮೆಲ್ಲನೆ ಅಲ್ಲಿಯೆ ಸುಳಿಯುತ್ತಿದ್ದಿತು. ಅದು ಸುಖದಿಂದ ಹೆತ್ತೊಡನೆ ತನಗೊಬ್ಬ ದೂತನನ್ನು ಅವಶ್ಯವಾಗಿ ಕೊಟ್ಟು ಕಳುಹಿಸಬೇಕೆಂದು ಶಕುಂತಳೆಯು ತನ್ನ ತಂದೆಗೆ ವಿಜ್ಞಾಪಿಸಿದಳು. ಕಣ್ವನು ಮರೆಯುವುದಿಲ್ಲವೆಂದು ಸಂತಯಿಸಿದನು. ಆಶ್ರಮದ ಜಿಂಕೆಗಳೆಲ್ಲ ತಾನು ಹೋಗುವುದನ್ನು ತಿಳಿದು, ಆಹಾರವನ್ನು ಜಗಿಯುವುದನ್ನು ಮರೆತು, ಕಣ್ಣುಗಳನ್ನರಳಿಸಿ ತನ್ನನ್ನೇ ಸ್ನೇಹದಿಂದ ನೋಡುವಾಗ ಶಕುಂತಳೆಯ ಕೋಮಲವಾದ ಕಣ್ಣುಗಳಲ್ಲಿ ನೀರು ತುಂಬಿ ಕಣ್ಣು ಕಾಣದಂತಾಗಿ ಕವಿತಾಮಯವಾದ ತನ್ನ ಬಳಗದ ದರ್ಶನವನ್ನು ಆಕೆಗೆ ಪಡೆಯದಂತಾಯಿತು. 'ಶಕುಂತಳೆಯೆ, ಅಳಬೇಡ. ಮಾರ್ಗವಿಲ್ಲಿ ವಿಷಮವಾಗಿದೆ. ಕಾಲು ಜಾರೀತು! ಕಣ್ಣೀರನ್ನು ತಡೆದಿಡು' ಎಂದು ಕಣ್ವನು ಸಂತಯಿಸುವಾಗ ಶಕುಂತಳೆಯ ಸೆರಗನ್ನು ಹಿಂದಿನಿಂದ ಎಳೆದಂತಾಯಿತು. 'ಯಾರಿದು ನನ್ನ ಗಮನವನ್ನು ತಡೆಯುವುದು?' ಎಂದವಳು ಹಿಂದಕ್ಕೆ ತಿರುಗಿದಾಗ ಕಣ್ವನು, 'ನಿನ್ನ ಸಾಕು ಮಗುವು' ಎಂದೊಡನೆಯೆ, ಶಕುಂತಳೆ ಠಕ್ಕನೆ ನಿಂತುಬಿಟ್ಟಳು. ಯಾವ ಜಿಂಕೆ ಮರಿಯನ್ನು ಅದರ ತಾಯಿ ಸತ್ತಂದಿನಿಂದ ಸಾಕಿದ್ದಳೋ ಆ ಕೂಸು ಇಂದು ತನ್ನ ತಾಯಿಗೆ ಸರಿಯಾದ ಶಕುಂತಳೆಯನ್ನು ಆಶ್ರಮವನ್ನು ಬಿಟ್ಟು ತೆರಳುವಾಗ ಸೆರಗನ್ನು

ಹಿಡಿದೆಳೆದು ನಿಲ್ಲಿಸಿಬಿಟ್ಟಿತ್ತು. ವನಾಂತರಕ್ಕೆ ತೆರಳಿ, ದುಷ್ಯಂತ ಮಹಾ ರಾಜನನ್ನು ಸೆಳೆದು ತಂದು ಶಕುಂತಳೆಯೊಡನೆ ಕೂಡಿಸಿತ್ತು. ಶಕುಂತಳೆಯ ಕೈಯಿಂದಲ್ಲದೆ ಮತ್ತಾರ ಕೈಯಿಂದಲೂ ನೀರನ್ನು ಕುಡಿದುದಲ್ಲ. ಬಾಲ್ಯ ದಲ್ಲಿ ಹುಲ್ಲು ತಿನ್ನಲು ಕಲಿಯುತ್ತಿರಲು ದರ್ಭೆಯ ಹರಿತವಾದ ತುದಿ ಯಿಂದ ಗಾಯವಾಗಿ ಮುಖಕ್ಕೆ ವ್ರಣಗಳೆದ್ದಾಗ ಇಂಗುದೀ ತೈಲವನ್ನು ಬಿಟ್ಟು ವಾಸಿ ಮಾಡಿದ ಮರಿಯನ್ನು, ತನ್ನ ಕೈಯ ಮುಷ್ಟಿಯಲ್ಲಿ ನೀವಾರ ಗಳನ್ನು ಹಿಡಿದು ತಿನ್ನಿಸಿ ಸಲಹಿದ ಮರಿಯನ್ನು ಕಂಡು, ಶಕುಂತಳೆಗೆ ಬಾಯ್ಬಾರದಂತಾಯಿತು. ಹುಲ್ಲೆಮರಿಗೆ ಮುದ್ದಿಟ್ಟು, ಬೆನ್ನ ಮೇಲೆ ಕೈಯಾಡಿಸಿ, 'ವತ್ಸ, ಸಹವಾಸ ಬಿಟ್ಟು ತೆರಳುವ ನನ್ನನ್ನೇಕೆ ಅನುಸರಿಸುವಿ? ಹುಟ್ಟಿದೊಡನೆ ತಾಯಿಂದ ಅಗಲಿದೆ; ಬೇರೆಯವರಿಂದ ಸಾಕಲ್ಪಟ್ಟೆ. ಈಗಲೂ ನನ್ನಿಂದ ಅಗಲಿದ ನಿನ್ನನ್ನು ತಂದೆಯು ಸಲಹುವನು. ಹಿಂದಕ್ಕೆ ಹೋಗಪ್ಪ', ಎಂದು ಅಳುತ್ತಳುತ್ತ ಮುನ್ನಡೆದಳು.

ಸ್ನೇಹಿತರೂ ಬಂಧುಗಳೂ ಪರಸ್ಥಳಕ್ಕೆ ಹೋಗುವರೊಡನೆ ನಡೆದು, ನೀರಿನ ಬಳಿ ನಿಲ್ಲುವುದು ವಾಡಿಕೆಯಿದೆ. ಅಲ್ಲೊಂದು ಕೊಳವು ಅವರಿಗೆ ಸಮೀಪವಾಯಿತು. ಆದುದರಿಂದ ಅಲ್ಲಿಯೇ ಬೆಳೆದಿದ್ದ ಸಪ್ತಪರ್ಣಿಯ ಬುಡದಲ್ಲಿ ಅವರು ನಿಂತುಕೊಂಡರು. ಕಣ್ವನು ದುಷ್ಯಂತನಂತಹ ಮಹಾ ರಾಜನಿಗೆ ತಾನಾವ ಸಂದೇಶವನ್ನು ಕಳುಹಿಸುವುದೆಂದು ಆಲೋಚಿಸುತ್ತ ನಿಂತನು. ಎಲ್ಲವೂ ನಿಶ್ಶಬ್ದವಾಗಿತ್ತು. ಎದುರಿದ್ದ ಕೊಳದಲ್ಲಿ ಹೆಣ್ಣು ಚಕ್ರವಾಕವೊಂದು ಕಮಲಪತ್ರದಲ್ಲಿ ಅಡಗಿಬಿಟ್ಟ ತನ್ನ ಸಹಚರನನ್ನು ಕಾಣದೆ ಬಳಲುತ್ತಿದ್ದುದನ್ನು ಶಕುಂತಳೆಯು ಕಂಡು, ಆ ಹೆಣ್ಣು ಚಕ್ರವಾಕ ಕ್ಕಾಗಿ ಬಹಳವಾಗಿ ನೊಂದಳು. ಅನಸೂಯೆಯಾಗ ಮುಂದೆ ಬಂದು, ನೊಂದ ಸಖಿಯನ್ನು ಕುರಿತು—'ಸಖಿ, ಹಾಗೆನ್ನಬೇಡ. ಈ ಚಕ್ರವಾಕ ಸ್ತ್ರೀಯು ವಿರಹವ್ಯಥೆಯಿಂದ ದೀರ್ಘವಾದ ರಜನಿಯನ್ನು ಕಳೆಯುವಳು; ಏಕೆಂದರೆ, ಆ ದುಃಖವು ಬಹಳ ಕಠಿನವಾದರೂ, ಆಶೆಯೆಂಬುದು ದುಃಖ ವನ್ನು ಮರೆಯಿಸುವುದು,' ಎಂದು ಸಮಾಧಾನ ಪಡಿಸಿದಳು.

ಮರದಡಿಯಲ್ಲಿ ನಿಂತು, ಅರಸನಿಗೆ ತಾನಾವ ಸಂದೇಶವನ್ನು ಕೊಟ್ಟು ಕಳುಹಿಸುವುದೆಂದು ಆಲೋಚಿಸಿ ನಿಂತ ಕಣ್ವನಿಗೆ ಅಪಶಕುನದ ಸೂಚನೆಯಾಯಿತು. ಆದುದರಿಂದ ಆತನು ತನ್ನ ಸಂದೇಶವು ದ್ವಯಾರ್ಥವುಳ್ಳುದನ್ನಾಗಿ ಮಾಡಿ ರಚಿಸಿದನು. ದುಷ್ಯಂತನೇನೋ ಭಾರತದ ಮಹಾರಾಜನು. ಆದರೆ ಶಕುಂತಳೆ ಕಾಡಿನ ಹುಡುಗಿ. ತಾನೇನೂ ದುಷ್ಯಂತನನ್ನು ಚೆನ್ನಾಗಿ ಬಲ್ಲವನಲ್ಲ. ವಿಷಯಾಸಕ್ತನಾಗಿ, ಧರ್ಮಪರಾಙ್ಮುಖನಾಗಿ ಅವನೇಕೆ ಕಾಡಿನ ಹುಡುಗಿಯಲ್ಲಿ ತಾತ್ಸಾರವನ್ನು ತೋರಿಸಬಾರದು? ಆದರೆ, ಹೀಗಾಗಲಿಕ್ಕಿಲ್ಲ. ದುಷ್ಯಂತನ ವಂಶವು ಲೋಕೋತ್ತರವಾದುದು; ಶಕುಂತಳಾ ದುಷ್ಯಂತರ ಪ್ರೇಮವು ಅನ್ಯೋನ್ಯವಾಗಿತ್ತು; ಅಲ್ಲದೆ ಶಕುಂತಳೆಯು ಮಹಾತಪಸ್ವಿಯ ಪ್ರೀತಿಯ ಮಗಳು. ಇವೆಲ್ಲವನ್ನು ಅಲ್ಲಗಳೆದರೆ, ಹಿರಿಯರ ಕೋಪವೂ ಮುನಿಯ ಮುನಿಸೂ ಒಂದಾಗಿ ಅನಿಷ್ಟವಾಗಬಹುದು.

ಕಣ್ವನೆಂದನು—'ಎಲೆ ಶಾರ್ಙ್ಗರವ! ಶಕುಂತಳೆಯನ್ನು ಮುಂದಿಟ್ಟು, ರಾಜನಿಗೆ ಹೀಗೆಂದು ತಿಳಿಸು: ಸಂಯಮವೆ ಧನವಾಗಿದ್ದ ಮುನಿಯ ಪುತ್ರಿಯನ್ನು ನೀನು ಮದುವೆಯಾದೆ; ಗೌರವವೆ ಧನವಾಗುಳ್ಳ ನಿನ್ನಲ್ಲಿ ಈಕೆ ಪ್ರೇಮವನ್ನಿಟ್ಟಳು. ನನ್ನೀ ಪ್ರಿಯಪುತ್ರಿಯನ್ನು, ಆದುದರಿಂದ, ಇತರ ಹೆಂಡಂದಿಯರಂತೆ ಸರಿಗಂಡು ಬಾಳು. ವಧುವಿನ ಬಂಧುವಾದುದರಿಂದ ಇನ್ನು ಹೆಚ್ಚು ಹೇಳಲಾರೆನು. ಏಕೆಂದರೆ, ಉಳಿದುದೆಲ್ಲ ವಿಧಿವಶವಾಗಿದೆ.'

ಕಣ್ವನು ತದನಂತರ ತನ್ನ ಮಗಳಿಗೆ ಬುದ್ಧಿವಾದವನ್ನು ಹೇಳಿದನು. ವನವಾಸಿಯಾದರೂ ಆತನಿಗೆ ಲೌಕಿಕಜ್ಞಾನವು ಬಹಳವಿದ್ದಿತು. 'ಮಗಳೆ, ಅರಸನ ಮನೆಯನ್ನು ತುಂಬುವವಳೆ, ಹಿರಿಯರ ಸೇವೆಮಾಡು. ಭಾಗ್ಯ ಬಂತೆಂದು ಹಿಗ್ಗಬೇಡ. ಶಕುಂತಳೆ, ಸೇವಕರಲ್ಲಿ ದಾಕ್ಷಿಣ್ಯದಿಂದ ವರ್ತಿಸಿ, ಸವತಿಯರಲ್ಲಿ ಗೆಳೆತನದಿಂದಿದ್ದು ಗಂಡನಿಗೆ ಅನುಕೂಲೆಯಾಗು. ಹೀಗಿದ್ದರೆ ಗರತಿಯಾಗುವೆ; ಇಲ್ಲದಿದ್ದರೆ, ಕುಲಕ್ಕೆ ಕಳಂಕವನ್ನು ತಂದೊಡ್ಡುವೆ.'

ಗೌತಮಿಯಾಗ—'ಅಮ್ಮ, ಶಕುಂತಳೆ, ಇಂತಿಷ್ಟು ಉಪದೇಶವನ್ನು ಚೆನ್ನಾಗಿ ಅವಧರಿಸು,' ಎಂದು ಮಗಳಿಗೆ ಹೇಳಿದಳು. ಶಕುಂತಳೆಯು ಬಾಗಿ, ತಂದೆಯ ಕಾಲ್ಗೆರಗಿದಳು.

'ತಂದೆಯೆ, ಮಲಯಪರ್ವತದ ತಟದಿಂದ ಪರಿಭ್ರಷ್ಟವಾದ ಚಂದನ ಲತೆಯಂತೆ ಇನ್ನು ಮುಂದೆ ನಿಮ್ಮನ್ನು ನೋಡದೆ ಪಟ್ಟಣದಲ್ಲಿ ಹೇಗೆ ಜೀವಿತವನ್ನು ಹಿಡಿದುಕೊಳ್ಳಲಿ? ಈ ಪ್ರಿಯ ಸಖಿಯರನ್ನು ನನ್ನೊಡನೆ ಕಳುಹಿಸಿಕೊಡು,' ಎಂದು ಶಕುಂತಳೆಯು ತಂದೆಯೊಡನೆ ಕೇಳಿಕೊಂಡಳು. ಆದರೆ ಕಣ್ವನು, 'ಮಗೂ, ಅಲ್ಲಿಗೆ ಇವರು ತೆರಳುವುದು ಉಚಿತವಲ್ಲ; ಇವರಿಗೂ ಮದುವೆಯಾಗಬೇಕಲ್ಲವೆ?' ಎಂದು, ಮಗಳ ಮಾತಿಗೆ ಒಪ್ಪಲಿಲ್ಲ. ಶಕುಂತಳೆಯು ದುಃಖದಿಂದ ಬಿಕ್ಕಿ ಅಳುತ್ತ ತನ್ನ ಜೀವದ ಗೆಳತಿಯರತ್ತ ನಡೆದು, ಅವರಿಬ್ಬರನ್ನೂ ಏಕಕಾಲಕ್ಕೆ ಆಲಿಂಗಿಸಿದಳು. ಅನಸೂಯೆಯು ತನ್ನ ಪ್ರಿಯ ಸಖಿಗೆ—'ಸಖಿ, ಅರಸನು ನಿನ್ನನ್ನು ಗುರುತಿಸುವುದಿಲ್ಲವಾದರೆ, ಈ ಉಂಗುರವನ್ನು ಆತನಿಗೆ ತೋರಿಸು,' ಎಂದು ಸೂಚಿಸಿದಳು. ಈ ಮಾತನ್ನು ಕೇಳಿದೊಡನೆಯೆ ಶಕುಂತಳೆಯ ಹೃದಯವು ಕಂಪಿಸಿತು. ಮೈಯೆಲ್ಲ ರೋಮಾಂಚವಾಯಿತು. 'ಹಾಗೇನೂ ಇಲ್ಲ. ಸ್ನೇಹವು ಯಾವಾಗಲೂ ಪಾಪಶಂಕಿಯು,' ಎಂದು ಪ್ರಿಯಂವದೆಯು ಶಕುಂತಳೆಯನ್ನು ಸಮಾಧಾನ ಪಡಿಸಿದಳು.

ಸವಿತೃದೇವನು ನಡುನೆತ್ತಿಗೆ ಬಂದಿದ್ದನು. ಶಾರ್ಙ್ಗರವನಿನ್ನು ಹೊತ್ತಾಗುವುದೆಂದನು. ಶಕುಂತಳೆಯು ತಪೋವನಕ್ಕೆ ಇದಿರಾಗಿ ನಿಂತಳು. ಕಣ್ವನಾಗ—'ಮಗಳೆ, ಕಳವಳ ಪಡಬೇಡ. ಕುಲೀನನಾದ ಪತಿಗೆಃಪ್ರುವ ಪಟ್ಟದ ರಾಣಿಯಾಗಿ, ವೈಭವದಿಂದ ಮೆರೆಯುವವಳಾಗಿ ಪತಿಸೇವಾಸಕ್ತೆಯಾಗಿ, ಸುಗಾತ್ರಪುತ್ರನ ಜನನಿಯಾಗಿ, ವಿಯೋಗ ದುಃಖವೆಲ್ಲವನ್ನು ಮರೆತು ಬಿಡುವಿ, ಚಿಂತಿಸದಿರು,' ಎಂದು ಮಗಳನ್ನು ತಬ್ಬಿದನು. 'ಅಪ್ಪಾ, ಈ ತಪೋವನಕ್ಕೆ ಇನ್ನೆಷ್ಟು ದಿವಸಕ್ಕೆ ಬರುವೆನು?' ಎಂದು ಶಕುಂತಳೆಯು ದುಃಖಿಸಿದಳು. 'ಮಗಳೆ, ಕ್ಷಿತಿಸತಿಗೆ ಸವತಿಯಾಗಿ, ಅಪ್ರತಿರಥನಾದ ಪುತ್ರನನ್ನು ಹೆತ್ತು, ಆತನನ್ನು ರಾಜ್ಯಭಾರದಲ್ಲಿ ನಿಯೋಜಿಸಿ, ಇದೇ ಕಾಡಿಗೆ, ಇದೇ ಆಶ್ರಮಕ್ಕೆ ಗಂಡನೊಡನೆ ವಾನಪ್ರಸ್ಥಕ್ಕಾಗಿ ಬರುವವಳಾಗುವೆ, ದುಃಖಿಸಬೇಡ,' ಎಂದು ಕಡೆಯ ಸಲಕ್ಕೆ ಮಗಳನ್ನು ಕಣ್ವನು ಹರಸಿದನು. ಶಾರ್ಙ್ಗರವನು ಹಾದಿಹಿಡಿದನು. ಗೌತಮಿಯು ಮುನ್ನಡೆದಳು. ಶಕುಂತಳೆಯೂ ಕಾಲ್ತೆಗೆದಳು.

ಶಾರ್ಙ್ಗರವನೆ ಮೊದಲಾದ ಋಷಿಗಳು ಶಕುಂತಳೆಯೊಡಗೂಡಿ ಹಸ್ತಿನಾವತಿಯತ್ತ ತೆರಳಿದರು. ಅವರೆಲ್ಲರೂ ವನದ ಗಿಡಮರಬಳ್ಳಿಗಳಲ್ಲಿ ಅಡಗಿದೊಡನೆ, ಕಣ್ವನೂ ಪ್ರಿಯಂವದಾನಸೂಯೆಯರೂ ಆಶ್ರಮಕ್ಕೆ ನಡೆದರು. ಶಕುಂತಳೆಯಿಲ್ಲದೆ ಆಶ್ರಮವು ಶೂನ್ಯವಾಗಿತ್ತು. ಶಕುಂತಳೆ ಹೋದುದರಿಂದ ಶೂನ್ಯವಾದ ತಪೋವನವನ್ನು ಸೇರಲು ಅವರಿಗೆ ಮನಸ್ಸು ಒಪ್ಪಲಿಲ್ಲ. ಸ್ನೇಹವೆಂಬುದು ಎಂತಹ ವಿರಕ್ತನನ್ನೂ ಮರುಳುಮಾಡಬಲ್ಲುದು. ಶಕುಂತಳೆಯು ಕೈಮುಟ್ಟಿ ಬೆಳೆಸಿದ ಗಿಡಬಳ್ಳಿಗಳನ್ನು ಕಂಡು ಕಣ್ವನು ದುಃಖಿಸಿದನು. ಹಿಡಿಹಿಡಿ ನೀವಾರವನ್ನು ಕೊಟ್ಟು ಶಕುಂತಳೆ ರಕ್ಷಿಸಿದ ಹುಲ್ಲೆಮರಿಯನ್ನು ಕಂಡು ಸಖಿಯರು ಕಣ್ಣೀರಿಟ್ಟರು. ಆದರೆ, ಒಂದು ವಿಷಯದಲ್ಲಿ ಮಾತ್ರ ಕಣ್ವನು ನೆಮ್ಮದಿಯಾಗಿದ್ದನು. ಸ್ತ್ರೀಯು ಹೆರವರ ಒಡವೆಯು; ತನ್ನಲ್ಲಿಟ್ಟ ಒಡವೆಯನ್ನು ಅದರ ಯಜಮಾನನಿಗೆ ಕೊಟ್ಟವನಂತೆ ಕಣ್ವನು ಇಂದು ಶಕುಂತಳೆಯನ್ನು ಪತಿಗೃಹಕ್ಕೆ ಕಳುಹಿಸಿ ನಿಶ್ಚಿಂತನಾಗಿದ್ದನು.

---

## ೮. ಪತಿಗೃಹ ಪ್ರವೇಶ




ಟ್ಟಿ ಬೆಳೆದ ಕಣ್ವಾಶ್ರಮವನ್ನು ಬಿಟ್ಟು ಬಾಳಿ ಬದುಕುವ ದುಷ್ಯಂತನರಮನೆಗೆ ಶಕುಂತಳೆ ನಡೆದಳು. ವನವಾಸಬಂಧುಗಳ ಪರವಾಗಿ ಶಕುಂತಳೆಗೆ ಪ್ರಸ್ಥಾನಮಂಗಲವನ್ನು ಬಯಸಿದ ಕೋಗಿಲೆಯೆಂದಂತೆ, ಪರಿಮಳಯುಕ್ತನಾದ ಮಂದಮಾರುತನು ಅನುಕೂಲವಾಗಿ ಬೀಸಿ ಶಕುಂತಳೆಯನ್ನು ಸುಖಪಡಿಸಿದನು. ಅಲ್ಲಲ್ಲಿ ತಾವರೆಯ ಕೊಳಗಳು ಆಕೆಯ ಕಣ್ಮನಗಳನ್ನು ಆಹ್ಲಾದ ಪಡಿಸಿದುವು. ಬದಿಬದಿಯ ಗಿಡಬಳ್ಳಿಗಳು ಪಾರ್ಶ್ವಚರರಂತೆ ವರ್ತಿಸಿ, ಶಕುಂತಳೆಗೆ ರಾಜೋಪಚಾರಗಳನ್ನು ಮಾಡುವಂತಿದ್ದುವು. ಆ ಗಿಡಬಳ್ಳಿಗಳಲ್ಲಿ ವಾಸಮಾಡುವ ಹಕ್ಕಿಗಳು ವಂದಿಮಾಗಧರಂತೆ ಇಂಪಾಗಿ ಹಾಡಿ ಮಹಾರಾಜ್ಞಿಯನ್ನು ಹೊಗಳುತ್ತಿದ್ದುವು. ಮರದ ನೆರಳಿಂದ ತಂಪಾದ ನೆಲದಲ್ಲಿ ನಡೆಯಲಿಕ್ಕೆ ಶಕುಂತಳೆಗೆ ಆಯಾಸವಾಗಲಿಲ್ಲ. ಆಕೆಯು ಅಲ್ಲಲ್ಲಿಯ ಮರಗಳ ಹೆಸರುಗಳನ್ನು ಕೇಳುತ್ತಲೂ ಹಕ್ಕಿಗಳ ವಿಷಯ ಮಾತಾಡುತ್ತಲೂ ಅಧ್ವಖೇದವನ್ನು ಹೋಗಲಾಡಿಸುತ್ತಿದ್ದಳು.

ಅವಳೊಡನಿದ್ದ ಋಷಿಗಳು ಇಂದು ಮೆಲ್ಲನೆ ನಡೆಯುತ್ತಿದ್ದರು. ಕಾರಣ, ಕೋಮಲೆಯಾದ ಶಕುಂತಳೆಗೂ ಮುದುಕಿಯಾದ ಗೌತಮಿಗೂ ಋಷಿಗಳಷ್ಟು ವೇಗವಾಗಿ ನಡೆಯಲಾಗಲಿಲ್ಲ. ಋಷಿಗಳು ಸುತ್ತುಮುತ್ತಲಿನ ಪ್ರಕೃತಿಸೌಂದರ್ಯವನ್ನು ಕಂಡು ವಿಮರ್ಶಿಸುತ್ತ ನಡೆಯುತ್ತಿದ್ದರು; ವೇದಶಾಸ್ತ್ರದರ್ಶನಾದಿಗಳ ಪುಟ್ಟ ಪುಟ್ಟ ವಿಷಯಗಳನ್ನೆತ್ತಿ ಪ್ರಸ್ತಾವಿಸುತ್ತಿದ್ದರು. ಕಣ್ವಮಹರ್ಷಿಯ ತಪಸ್ಸಿನ ಮಹಿಮೆಯನ್ನು ಕೊಂಡಾಡುತ್ತಿದ್ದರು.

ಹಸ್ತಿನಾವತಿಗೆ ತೆರಳುವಾಗ ಗಂಗಾನದಿಯನ್ನು ಅವರು ದಾಟ ಬೇಕಾಗಿತ್ತು. ಆ ಗಂಗಾನದಿಯಲ್ಲಿ ಶಚೀತೀರ್ಥವೆಂಬ ಪ್ರಸಿದ್ಧವಾದ ಕ್ಷೇತ್ರವೊಂದು ಅವರಿಗೆ ಸಮೀಪವಾಯಿತು. ಭಾರತದ ಸಾವಿರಾರು ಜನರು ಅಲ್ಲಿಗೆ ಬಂದು ಅಲ್ಲಿಯ ಜಲತೀರ್ಥದಲ್ಲಿ ಮಿಂದು, ಜಪ ತಪೋನುಷ್ಠಾನಗಳಿಂದ ತಮ್ಮ ಸಮಸ್ತ ದುರಿತವನ್ನು ಹೋಗಲಾಡಿಸುವ ಇಚ್ಛೆಯಿಂದ ಜಗತ್ತಿನ ತಂದೆಗೆ ಮೊಣಕಾಲೂರುವ ಸ್ಥಳವದು! ಸಂತೋಷ ದಿಂದ ಮೆರೆಯುವ ಜನರು ಸಂಸಾರವನ್ನೊಮ್ಮೆಗೆ ಮರೆತು ಬಿಡುವೆವೆಂದು ಬಂದು, ನಶ್ವರವಾದ ಜಗತ್ತನ್ನು ಮರೆಯುತ್ತ ಪರಮಾತ್ಮನಿಗೆ ಸೆರಗೊಡ್ಡಿ ಬಿನ್ನವಿಸುವ ಸ್ಥಳವದು. ಸುಖದಿಂದ ಮೆರೆದು, ದುಃಖದಿಂದ ನರೆತು ಬಂದ ಜನರ ಕೂಡಿಕೆಯ ಸ್ಥಳವೇ ನಾಕನರಕದ ಹೊಂದಿಕೆಯಾದ ಸ್ಥಳವದು! ಆದುದರಿಂದಲೆ ನಮಗೆ ದೇವಸ್ಥಾನಗಳು ಪವಿತ್ರವು! ಆದುದ ರಿಂದಲೆ ನಮಗೆ ಗಂಗಾನದಿಯು ಪುಣ್ಯದಾಯಕಳು. ಆದುದರಿಂದಲೆ ಶಚೀತೀರ್ಥವನ್ನು ಹೊಂದಿದೊಡನೆಯೆ, ಋಷಿಗಳೆಲ್ಲ ಒಂದು ದಿವಸಕ್ಕೆ ಅಲ್ಲಿ ತಂಗಿ ವಿಶ್ರಮಿಸಿದರು.

ಶಚೀತೀರ್ಥವೆಂದರೆ ಪವಿತ್ರವಾದ ಕ್ಷೇತ್ರವಷ್ಟೆ? ಆದುದರಿಂದ ವೈಖಾನಸರೆಲ್ಲರು ಶಚೀತೀರ್ಥಕ್ಕೆ ನಮಸ್ಕರಿಸಿ, ನೀರಲ್ಲಿಳಿದು, ಮಿಂದು, ವಿಶೇಷವಾದ ಜಪತಪೋನುಷ್ಠಾನಗಳನ್ನು ಮಾಡಿದರು. ಆ ತೀರ್ಥದಲ್ಲಿ ಸಾವಿರಾರು ಜನರು ಸ್ನಾನಮಾಡಿ ತಮ್ಮ ದೇಹದ ಕೊಳೆಯನ್ನು ಹೋಗ ಲಾಡಿಸುತ್ತ ಮಾನಸಿಕ ಪಾಪವನ್ನೂ ನಿರ್ಮೂಲ ಮಾಡುತ್ತಿದ್ದರು. ಶಕುಂತಳೆಯು ಸಾವಿರಾರು ಜನರು ಕೂಡಿದ ತೀರದ ಮೇಲೆ ನಿಂತು ಕೈ ಗಳನ್ನು ಬೊಗಸೆಮಾಡಿ, ಹಣೆಯ ಮೇಲಿಟ್ಟು, ಶಚೀತೀರ್ಥಕ್ಕೆ ನಮಸ್ಕರಿಸಿ ದಳು. ತನ್ನ ಸಮಸ್ತ ದುರಿತವನ್ನು ಹೋಗಲಾಡಿಸೆಂದು ಬೇಡಿ ಕೊಂಡಳು. ತನ್ನ ಗಂಡನಿಗೆ ಉತ್ತರೋತ್ತರಾಭಿವೃದ್ಧಿಯು ಸಿದ್ಧಿಸಲೆಂದು ಪ್ರಾರ್ಥಿಸಿದಳು. ತನ್ನಿಂದ ವಿಯೋಗ ಹೊಂದಿದ ಕಣ್ವನಿಗೂ ಸಖಿಗಳಿಗೂ ನೆಮ್ಮದಿಯುಂಟಾಗಲೆಂದು ಬಿನ್ನವಿಸಿದಳು. ಅನಂತರ ತನ್ನ ಬೊಗಸೆ ಮಾಡಿದ ಕೈಯನ್ನು ಕೆಳತಂದು ಸಾಷ್ಟಾಂಗವೆರಗಿ ಗೌತಮಿಯೊಡನೆ

ದಡವೇರಿದಳು. ಮರುದಿವಸ ಹೊತ್ತಾರೆ ಎದ್ದು, ತಿರಿಗೊಮ್ಮೆ ಶಚೀ ತೀರ್ಥವನ್ನು ವಂದಿಸಿ, ಶಚೀತೀರ್ಥದ ಸಮಸ್ತ ಜಲಪ್ರಾಣಿಗಳಿಗೆಂದು ಆಹಾರಕೊಟ್ಟು, ಹಸ್ತಿನಾವತಿಯತ್ತ ವೈಖಾನಸರೊಡನೆ ಪ್ರಯಾಣ ಬೆಳೆಸಿ ದಳು. ಆಹಾ! ಶಚೀತೀರ್ಥವೆ, ನಿನ್ನ ದರ್ಶನದಿಂದ ಶಕುಂತಳೆಯ ಕಣ್ಣುಗಳು ಎಷ್ಟು ಪಾವನವಾಗಿರಬೇಕು? ನಿನ್ನ ತೀರದ ಗಿಡಬಳ್ಳಿಗಳಲ್ಲಿಯ ಹಕ್ಕಿಗಳ ಗಾಯನದಿಂದ ಆಕೆಯ ಕಿವಿಗಳು ಎಷ್ಟು ತೃಪ್ತವಾಗಿರಬೇಕು? ನಿನ್ನ ಮಾಧುರ್ಯಗಾಂಭೀರ್ಯಗಳ ವರ್ಚಸ್ಸಿನಿಂದ ಆಕೆಯ ಮನಸ್ಸು ಎಷ್ಟು ನೆಮ್ಮದಿಯಾಗಿರಬೇಕು? ಹೌದು, ನಿನ್ನ ವರ್ಚಸ್ಸಿನಿಂದ ಶಕುಂತಳೆಯು ಕಣ್ವವಿಯೋಗದ ದುಃಖವೆಲ್ಲವನ್ನು ಮರೆತುಬಿಟ್ಟಳು. ನಿನ್ನ ದರ್ಶನದಿಂದ ಶಕುಂತಳೆಯ ಪಾಪವೆಲ್ಲವೂ ನಿನ್ನಲ್ಲಿಯೆ ಇಳಿದು ನಿನ್ನ ಪುಟ್ಟಪುಟ್ಟ ತೆರೆಗಳೊಡನೆ ಹರಿದುಬಿಟ್ಟಿತು. ನಿನ್ನ ವರಪ್ರಸಾದದಿಂದಲೆ ಶಕುಂತಳೆ ನಾಡನ್ನು ಸೇರುವಳು. ಅವಳಿಗೆ ಶುಭವಾಗಲಿ! ಅವಳಿಗೆ ಮಂಗಳ ಮಸಗಲಿ!!

ವೈಖಾನಸರು ದಾರಿಯ ದಣುವನ್ನು ನೀಗಿ ಮುಂದಡಿಯಿಟ್ಟರು. ಶೀಘ್ರದಲ್ಲಿಯೆ ಅವರು ಪಟ್ಟಣಕ್ಕೆ ಸಮೀಪವಾದರು. ಶಾರ್ಙ್ಗರವನೆ ಮೊದಲಾದ ಕಣ್ವಶಿಷ್ಯರು ಅಷ್ಟರ ತನಕ ತಮ್ಮ ಆಶ್ರಮವನ್ನು ಬಿಟ್ಟು ಪಟ್ಟಣಕ್ಕೆ ಪ್ರಯಾಣ ಬೆಳೆಸಿದವರಲ್ಲ. ಪಟ್ಟಣದ ಗಲಭೆಯನ್ನು ಕಂಡು, ಪಟ್ಟಣದ ಹೆದ್ದಾರಿಗಳಲ್ಲಿ ಸಂಚರಿಸುವ ಪೃಥಕ್‌ಜನರ ವರ್ತನವನ್ನು ಕಂಡು, ಸ್ವಾತಂತ್ರ್ಯದ ಬಯಲನ್ನು ಬಿಟ್ಟು ಗಾಳಿಬೆಳಕಿಗೂ ತಡೆಯಿಟ್ಟು ಸ್ವಾತಂತ್ರ್ಯವನ್ನು ಧ್ವಂಸಮಾಡಿದ ಪಟ್ಟಣದ ಇಕ್ಕಟ್ಟಿನಲ್ಲಿ ಅವರಿಗೆ ಕಾಲಿ ಟ್ಟಂತಾಯಿತು. ಅವರಿಗೆ ಪಟ್ಟಣವು ಸೇರಲಿಲ್ಲ. ಕಾಳಿದಾಸನ ಅಭಿ ಪ್ರಾಯದಲ್ಲಿ ಹಳ್ಳಿಯು ಪಟ್ಟಣಕ್ಕಿಂತ ಒಂದು ಹಜ್ಜೆ ಮುಂದು, ಹಿಂದಲ್ಲ. ಪಟ್ಟಣದವನು ಸ್ನಾನಕ್ಕಾಗಿ ಮೈಗೆ ಎಣ್ಣೆ ಹಚ್ಚಿದವನಾದರೆ, ಹಳ್ಳಿಯವನು ಸ್ನಾನವನ್ನೆ ತೀರಿಸಿದವನು. ಹಳ್ಳಿಯವನು ಗುಣವಂತನಾದರೆ, ಪಟ್ಟಣಿ ಗನು ನಿಂದಿತನು. ಪಟ್ಟಣಿಗನು ನಿದ್ರೆಯಲ್ಲಿದ್ದರೆ, ಹಳ್ಳಿಯವನು ಎದ್ದೆ ಚ್ಚೆತ್ತವನು. ಪಟ್ಟಣವೊಂದು ಬಂಧನವು; ಹಳ್ಳಿಯು ಸಾತಂತ್ರ್ಯದ ಆಡುಂ

ಬೊಲವು. ಕಾಳಿದಾಸನು ಹೊಗಳಿದ ಹಳ್ಳಿಗಳಿಗೂ ನಮ್ಮ ಆಧುನಿಕ ಹಳ್ಳಿಗಳಿಗೂ ಅಜಗಜಾಂತರವಿದೆಯಲ್ಲವೆ? ಹಾಗಾಗಲು ಕಾರಣವೇನು?

ವೈಖಾನಸರು ಅರಮನೆಯತ್ತ ನಡೆದರು. ಅರಮನೆಯ ಸುತ್ತ ನೆರೆದ ಜನಸ್ತೋಮವನ್ನು ಕಂಡು, ವೈಖಾನಸರಿಗೆ ಬಹಳ ಆಶ್ಚರ್ಯ ವಾಯಿತು. ಬೆಂಕಿ ಬಿದ್ದ ಮನೆಯಲ್ಲಿ ಜನರ ಗಲಭೆಯಿರುವಂತೆ, ಪಟ್ಟಣ ದಲ್ಲಿ ಗಲಭೆಯಿದೆಯೆಂದು ಅವರು ತಿಳಿದುಕೊಂಡರು. ತಮ್ಮ ಪಟ್ಟಣಕ್ಕೆ ಹಿಮಾಚಲದ ತಪ್ಪಲಿನ ತಪಸ್ವಿಗಳು ಬಂದಿರುವರೆಂದು ಇವರನ್ನು ಜನರೆಲ್ಲ ಸುತ್ತುಗಟ್ಟಿದರು. ತಮಗೆ ಅರಸನೊಡನೆ ಕಾರ್ಯವುಂಟೆಂದೂ ತಾವು ಆತನನ್ನು ಕಾಣಲಿಕ್ಕೆ ಬಂದವರೆಂದೂ ಅವರು ಹೇಳಿದೊಡನೆಯೇ ರಾಜ ದೂತರು ಬಂದು ಋಷಿಗಳನ್ನು ಕಂಡು ಮಾತಾಡಿಸಿದರು.

ಋಷಿಗಳು ತನ್ನ ದರ್ಶನಾಪೇಕ್ಷಿಗಳಾಗಿ ಬಂದಿರುವರೆಂದು ಕೇಳಿ ಅರಸನು ತನ್ನಿಂದ ಎಲ್ಲಿ ಧರ್ಮಲೋಪವಾಗಿದೆಯೋ ಎಂದು ಶಂಕಿಸಿ ದನು. ಋಷಿಗಳು ಸ್ತ್ರೀಸಮೇತರಾಗಿ ಇರುವರೆಂದು ಕೇಳಿದಾಗಲಂತೂ ಅರಸನಿಗೆ ಮನಸ್ಸಿನಲ್ಲಿ ಏನೋ ಸಂಶಯವು ಮೊಳೆಯುಲನುವಾಯಿತು. ಕಣ್ವಮಹರ್ಷಿಯು ಯಾವ ಸಂದೇಶವನ್ನು ಕೊಟ್ಟುಕಳುಹಿಸಿಯಾನು? ಆಶ್ರಮವಾಸಿಗಳಿಗೆ ಎಡರುಂಟಾಗಿರಬಹುದೆ? ಧರ್ಮಾರಣ್ಯದ ಪ್ರಾಣಿಗಳಿಗೆ ಯಾವನೊಬ್ಬನಿಂದ ಸಂಕಟವಾಗಿರಬಹುದೆ? ಆಶ್ರಮದ ಸಾಧುಗಳಲ್ಲಿ ಆರಾದರೂ ಅತ್ಯಾಚಾರವನ್ನು ಗೈದಿರಬಹುದೆ? ಅಥವಾ ಅರಸನ ದುಷ್ಕೃತ ಗಳ ಫಲವಾಗಿ ಮುನಿಯ ತಪೋವನದ ಗಿಡಬಳ್ಳಿಗಳು ಫಲಪುಷ್ಪಗಳನ್ನು ತಳೆಯುವುದನ್ನು ಬಿಟ್ಟಿರಬಹುದೆ? ಅರಸನು ಊಹಿಸಲಾರದಾದನು. ಕಣ್ವನು ನಿಷ್ಕಾರಣವಾಗಿ ಸಂದೇಶವನ್ನು ಕೊಟ್ಟುಕಳುಹಿಸಲಾರನು. ಅರಸನಿಗೆ ಕಣ್ವಾಶ್ರಮವನ್ನು ಕಂಡ ನೆನಪುಂಟು; ಆತನು ಕಣ್ವನಿಂದ ಪ್ರಸಾದ ಹೊಂದಿದ್ದುಂಟು. ಕಣ್ವಾಶ್ರಮದ ಸಾಧುಸಂತರಿಗೆ, ಬಾಲಬಾಲೆಯರಿಗೆ, ಮನದಣಿಯುವಷ್ಟು ಸುವರ್ಣದಾನಮಾಡಿದ ನೆನಪುಂಟು. ಆದರೆ ಕಣ್ವನು ಏನೆಂದು ಸಂದೇಶ ಕಳುಹಿಸಬೇಕಾಯಿತೆಂದು ಆತನು ತಿಳಿಯಲಾರದಾ ದನು. ಋಷಿಗಳು ಸಚ್ಚರಿತ್ರವನ್ನು ಕೊಂಡಾಡತಕ್ಕವರು; ಪೂಜ್ಯರಾದ

ಮಹಾರಾಜರನ್ನು ಸಂಭಾವಿಸಲಿಕ್ಕೆ ಬಂದಿರಬಹುದೆಂದು ಅರಸನಿಗೊಬ್ಬನು ಸೂಚಿಸಿದನು. ಯಾವುದಕ್ಕೂ ಅವರನ್ನು ತಾನು ಕಾಣುವೆನೆಂದೂ ಬಂದ ಅತಿಥಿಗಳನ್ನು ಚೆನ್ನಾಗಿ ಸತ್ಕರಿಸಬೇಕೆಂದೂ ಪುರೋಹಿತ ಸೋಮರಾತನಿಗೆ ಅರಸನು ಹೇಳಿ ಕಳುಹಿಸಿದನು.

ಋಷಿಗಳನ್ನು ಕಾಣುವುದಕ್ಕಾಗಿ ಧರ್ಮಾಸನದೆಡೆಗೆ ಅರಸನು ನಡೆಯುತ್ತಿದ್ದಾಗ ಆತನಿಗೊಂದು ಗೀತಿಯು ಕೇಳಿಸಿತು. ಸಮೀಪದಲ್ಲಿ ಮಾಧವ್ಯನಿದ್ದನು. ಗೀತಿಯ ಅರ್ಥವು ಧ್ವನಿಪೂರ್ಣವಾಗಿತ್ತು. 'ಎಲೈ ಮಧುಕರನೆ, ಹೊಸ ಜೇನಿಗೆಳಸಿ, ಚೂತಮಂಜರಿಯನ್ನೊಮ್ಮೆಗೆ ಚುಂಬಿಸಿ ಕಮಲಪುಷ್ಪವನ್ನು ಸೇರಿದೊಡನೆ ಪೂರ್ವಸಂತೋಷದ ಚೂತಮಂಜರಿಯನ್ನು ಮರೆದೆಯಲ್ಲವೆ?' ಈ ಗೀತಿಯನ್ನು ಕೇಳಿ ಅರಸನು ನಸುನಕ್ಕನು. ತನ್ನ ಹೆಂಡತಿಯಾದ ಹಂಸಪದಿಕೆಯು ತನ್ನನ್ನು ಹೀಗೆ ಏಳಿಸುತ್ತಿರುವಳೆಂದು ಮನಗಂಡನು. ತನ್ನನ್ನು ಜಾಣ್ಮೆಯಿಂದ ಏಳಿಸಿದೆಯೆಂದು ಆ ಹಂಸಪದಿಕೆಗೆ ತಿಳಿಸಲಿಕ್ಕೆ ಮಾಧವ್ಯನನ್ನು ಅವಳತ್ತ ಕಳುಹಿಸಿದನು. ಪಾಪ! ಮಾಧವ್ಯನಿಗೆ ಋಷಿಗಳನ್ನು ಕಾಣಬೇಕೆಂಬ ಉತ್ಕಟವಾದ ಇಚ್ಛೆಯಿತ್ತು, ಬ್ರಾಹ್ಮಣನಲ್ಲವೆ? ಆದರೆ ರಾಣಿಗೆ ಹೆದರುತ್ತಿದ್ದರೂ ರಾಜಾಜ್ಞೆಯೆಂದು ಆತನಿಗೆ ಅತ್ತ ನಡೆಯಬೇಕಾಯಿತು.

ಮಾಧವ್ಯನತ್ತ ತೆರಳಿದನಂತರ ಗೀತಿಯನ್ನು ಕೇಳಿದ ಅರಸನಿಗೆ ಮನಸ್ಸಿನಲ್ಲೇನೋ ಉಮ್ಮಳಿಸಿತು. ಸುಖದಿಂದಲೂ ವೈಭವದಿಂದಲೂ ಯುಕ್ತನಾದಂತಹ ಅರಸನಿಗೆ ಹಂಸಪದಿಕೆಯ ಗೀತಿಯನ್ನು ಕೇಳಿದೊಡನೆ ಮನಸ್ಸು ಪರ್ಯಾಕುಲವಾಯಿತು. ಮಧುಮಧುರವಾದ ಶಬ್ದವನ್ನು ಕೇಳಿದ ಮಾತ್ರಕ್ಕೆ, ರಮಣೀಯವಾದ ವಸ್ತುವೊಂದನ್ನು ನೋಡಿದ ಮಾತ್ರಕ್ಕೆ, ಮನಸ್ಸು ಕಳವಳಗೊಂಡುದಕ್ಕಾಗಿ ಬಹಳವಾಗಿ ಆಶ್ಚರ್ಯಪಟ್ಟನು. ಸಮೀಪದಲ್ಲಿ ಮಿತ್ರನಾದ ಮಾಧವ್ಯನು ಇದ್ದಿದ್ದರೆ, ಈ ವಿಷಯವನ್ನು ಆತನೊಡನೆ ವಿಚಾರಿಸಿ ತಿಳಿಯಬಹುದಿತ್ತು. ಪೂರ್ವಜನ್ಮದ ಮೈತ್ರಿಯು ಹೃದಯದ ಅಂತರಾಳದಲ್ಲಿ ಹುದುಗಿದ್ದು ಅದು ಸರಿಯಾಗಿ ತಿಳಿಯದಂತಾಗಿರಬಹುದೆಂದು ಅರಸನು ಊಹಿಸಿದನು.

ಮತ್ತು ಕಣ್ವಾಶ್ರಮದ ಋಷಿಗಳು ತನ್ನನ್ನು ಕಾಯುತ್ತಿರಬಹುದೆಂದು ಶೀಘ್ರವಾಗಿ ಮುನ್ನಡೆದನು.

ಪುರೋಹಿತನು ಬಂದ ಅತಿಥಿಗಳನ್ನು ತಕ್ಕ ರೀತಿಯಿಂದ ಸನ್ಮಾನಿಸಿ ಅರಸನಿದ್ದೆಡೆಗೆ ಕರಕೊಂಡು ಬಂದನು. ಅವರೊಡನೆ ಶಕುಂತಳೆಯೂ ಗೌತಮಿಯೂ ಇದ್ದರು. ಶಕುಂತಳೆಯು ತಲೆಗೆ ಸೆರಗಿನ ಮುಸುಕನ್ನು ಇಟ್ಟಿದ್ದಳು. ಅವಳ ಶರೀರಕಾಂತಿಯು ಸ್ವಲ್ಪವೇ ತೋರುತ್ತಿತ್ತು. ಇವ ಳಾರಿರಬಹುದೆಂದು ಅರಸನು ತರ್ಕಿಸಿದನು. ತಾಪಸರ ಮಧ್ಯದಲ್ಲಿ ಕಾಣುವವಳೀಕೆ ಹಣ್ಣೆಲೆಗಳ ಮಧ್ಯೇ ನೆಗೆದು ಬಂದ ಚಿಗುರೆಲೆಯೆಂದು ಅರಸನು ಎಣಿಸಿದನು. ಆದರೆ ಪರಪತ್ನಿಯನ್ನು ವರ್ಣಿಸಬಾರದೆಂದು ಆತನು ತನ್ನ ದೃಷ್ಟಿಯನ್ನು ಹಿಂದಕ್ಕೆಳೆದುಬಿಟ್ಟನು.

ಶಕುಂತಳೆಗೆ ಅನಿಷ್ಟಸೂಚಕವಾಗಿ ಬಲಗಣ್ಣು ಹಾರಿತು. ಗೌತ ಮಿಯು ಹೆದರ ಬೇಡೆಂದಳು. ಪತಿಕುಲದೇವತೆಯು ಮಂಗಳವನ್ನುಂಟು ಮಾಡಲೆಂದು ಆಕೆ ಮುಗಳನ್ನು ಹರಸಿದಳು. ಆಗ ಶಾರ್ಙ್ಗರವನೇ ಮೊದ ಲಾದ ಋಷಿಗಳು ಕೈಗಳನ್ನೆತ್ತಿ, 'ಎಲೈ ಮಹಾರಾಜನೆ, ಜಯಶೀಲನಾಗು,' ಎಂದು ಅರಸನನ್ನು ಆಶೀರ್ವದಿಸಿದರು. ಅರಸನು ಎದ್ದು ನಿಂತು ಎಲ್ಲ ರಿಗೂ ನಮಸ್ಕರಿಸಿದನು.

'ಮುನಿಗಳ ತಪಸ್ಸು ನಿರ್ವಿಘ್ನವಾಗಿ ನಡೆಯುವುದಲ್ಲವೆ?' ಎಂದು ರಾಜನು ಮತ್ತೆ ಪ್ರಶ್ನಿಸಿದನು.

'ಮಹಾರಾಜನೆ, ನಿನ್ನಂತಹ ಅರಸನು ನಮ್ಮನ್ನು ರಕ್ಷಿಸುತ್ತಿರಲು, ಸತ್ಪುರುಷರ ತಪಸ್ಸಿಗೆ ವಿಘ್ನಗಳು ಎಂತುಂಟಾದಾವು? ಸೂರ್ಯನು ಪ್ರಜ್ವ ಲಿಸುವಾಗ ಭೂಮಿಯಲ್ಲಿ ಕತ್ತಲೆ ಹೇಗೆ ಉಳಿದೀತು?' ಎಂದು ಶಾರ್ಙ್ಗ ರವನು ಪ್ರತ್ಯುತ್ತರವಿತ್ತನು.

'ಹಾಗಾದರೆ, ನನ್ನ ಅರಸುತನವು ಸಾರ್ಥಕವಾದಂತಾಯಿತು. ಪೂಜ್ಯ ರಾದ ಕಣ್ವರು ಕ್ಷೇಮವಲ್ಲವೆ? ಲೋಕಾನುಗ್ರಹಕ್ಕಾಗಿ ಕಷ್ಟಪಡುತ್ತಿರು ವರು.'

'ಅವರೇನೋ ಸಿದ್ಧಪುರುಷರು. ಸಿದ್ಧಪುರುಷರಿಗೆ ಕ್ಷೇಮವೆಂಬುದು ತಮ್ಮ ಅಂಕೆಯಲ್ಲಿಯೇ ಇರುವುದು. ಕುಲಪತಿಗಳಾದ ಕಣ್ವರು ಕುಶಲ ಪ್ರಶ್ನಪೂರ್ವಕವಾಗಿ ನಿನಗೆ ಈ ಮಾತನ್ನು ಹೇಳಿರುವರು.'

'ಪೂಜ್ಯರಾದ ಕಣ್ವರು ಏನಪ್ಪಣೆ ಕೊಟ್ಟಿರುವರು?'

'ಎಲೈ ಮಹಾರಾಜನೆ, ಕಣ್ವನು ಹೀಗೆಂದಿರುವನು:—'ನನ್ನ ಪುತ್ರಿಯುನ್ನು ನೀನು ಪರಸ್ಪರ ಪ್ರೀತಿಯಿಂದ ಗಾಂಧರ್ವವಿವಾಹ ಮಾಡಿಕೊಂಡ ಕಾರಣಕ್ಕೆ ಪ್ರೀತನಾಗಿ ನಿಮ್ಮಿಬ್ಬರನ್ನು ಹರಸಿರುವೆನು. ಏಕೆಂದರೆ, ನೀನು ಪೂಜ್ಯರಾದವರಲ್ಲಿ ಅಗ್ರೇಸರನು; ಶಕುಂತಳೆಯು ಮೂರ್ತಿತಳೆದು ಬಂದ ಸತ್ಕ್ರಿಯೆಯು. ನಿಮ್ಮಿಬ್ಬರಲ್ಲಿ ಸಮಾನ ಸದ್ಗುಣಗಳುಂಟು. ತುಲ್ಯ ಗುಣವುಳ್ಳ ನಿಮ್ಮನ್ನು ಕೂಡಿಹಾಕಿದುದರಿಂದ ಬ್ರಹ್ಮನಿಗೆ ಇದ್ದ ಅಪವಾದವು ಹೋದಂತಾಗಿದೆ. ಈಗ ಗರ್ಭಿಣಿಯಾದಂತಹ ಈ ನನ್ನ ಸತ್ಪುತ್ರಿಯನ್ನು ಧರ್ಮಾಚರಣಾರ್ಥವಾಗಿ ಸ್ವೀಕರಿಸಿ, ಬಾಳು.'

ಗೌತಮಿಯಾಗ ಮುಂದೆ ಬಂದು, 'ಎಲೈ ಮಹಾರಾಜನೆ, ನನಗೆ ಮಾತಾಡುವುದಕ್ಕೆ ಅವಕಾಶವಿಲ್ಲ. ಆದರೂ ಒಂದು ಮಾತನ್ನು ಹೇಳಲು ಇಚ್ಛಿಸುವೆನು. ಗುರುಜನರೊಡನೆ ಕೇಳದೆ, ಬಂಧುಜನಗಳೊಡನೆ ವಿಚಾರಿಸದೆ, ನೀವು ನೀವೇ ಪರಸ್ಪರ ಪ್ರೀತಿಯಿಂದ ವರ್ತಿಸಿದುದನ್ನು ನೋಡಿದರೆ, ನಿಮ್ಮಲ್ಲಿ ಯಾರಿಗೆ ಏನು ಹೇಳಲಿಕ್ಕಿದೆ?' ಎಂದು ಹಿಂದಕ್ಕೆ ಸರಿದಳು. ಅವಳೇನೋ ಹೇಳಲಿಕ್ಕೆ ಬಂದವಳು ತನಗೆ ಮಾತಾಡಲು ಅವಕಾಶವಿಲ್ಲವೆಂದು ಮನಗಂಡಳು. ಶಾರ್ಙ್ಗರವನ ಮಾತನ್ನು ಕೇಳಿ ಅರಸನ ಮುಖವು ಕಪ್ಪು ಕಪ್ಪಾದುದನ್ನು ಅವಳು ಕಂಡುಹಿಡಿದಿದ್ದಳು. ಅನಂತರ, ತಾನು ಸಂಬೋಧಿಸುತ್ತಿದ್ದಾಗ ಅರಸನಿಗೆ ಬೇಸರವಾದುದನ್ನು ನೋಡಿದ್ದಳು. ಆದುದರಿಂದ ಅವಳು ಹಿಂದೆ ಸರಿದಳು.

ಅರಸನಿಗೆ ಇದರ ಅರ್ಥವಾಗಲಿಲ್ಲ. ಮುನಿಕುಮಾರನೊಬ್ಬನು ಮುಂದೆ ಬಂದು, 'ನಿನ್ನ ಹೆಂಡತಿ ಈಕೆ,' ಎಂದನು; ತಾಪಸಿಯೊಬ್ಬಳು ಎದುರುನಿಂತು, 'ನೀನು ಗಾಂಧರ್ವದಿಂದ ಮದುವೆಯಾದೆ', ಎಂದಳು. ಯಾವ ಗಾಂಧರ್ವವೊ, ಯಾವ ಮದುವೆಯೊ, ಆತನಿಗರಿಯದು. ಅರಸರು

ಮದುವೆಯೆಂಬುದನ್ನು ಯಾರೊಬ್ಬರಿಗೂ ಹೇಳದೆ ಕೇಳದೆ ಮಾಡುವ ರೇನು? ತಾನೆಲ್ಲಿ, ಹಿಮಾಲಯದ ಕಾಡಾಡಿಗಳೆಲ್ಲಿ? 'ಎಲೈ ಮುನಿಕುಮಾರನೆ! ನೀನು ಹೇಳುತ್ತಿರುವುದಾದರೂ ಏನು? ನನಗರ್ಥವಾಗಲಿಲ್ಲ,' ಎಂದ, ಅರಸನು ಆಶ್ಚರ್ಯದಿಂದ ಕೇಳಿದನು. ಗುಡುಗಿಗೆ ಹೆದರಿ ಬಳುಕುವ ಬಳ್ಳಿಯಂತೆ ಶಕುಂತಳೆ ನಡುಗಿದಳು. ಮಂಜಿನ ಭಾರಕ್ಕೆ ಬಳುಕಿಬೀಳುವ ಹೂವಿನಂತೆ ಮುದುಕಿ ತಲೆಬಾಗಿದಳು. ವನಾಂತರದ ವೃಕ್ಷವು ಬಿರುಗಾಳಿಗೆ ಬೀಸುವಂತೆ ಶಾರ್ಙ್ಗರವನು ತಲೆದೂಗಿದನು. ಏನು ಹೇಳಬೇಕೆಂದು ಆತನಿಗೆ ತೋರದಾಯಿತು. ಪತಿಯುಳ್ಳ ಸತಿಯು ತಂದೆಯ ಮನೆಯಲ್ಲಿ ಬಹುಕಾಲಕ್ಕೆ ವಾಸಮಾಡಿದರೆ ಲೋಕನಿಂದೆಯಿದೆ ಎಂಬ ನೀತಿಯ ಮಾತು ಆತನಿಗೆ ಆಗ ನೆನಪಿಗೆ ಬಂತು. ಧೈರ್ಯದಿಂದಾತನು ಅರಸನಿಗೆ ಹೀಗೆಂದನು—'ಲೋಕವ್ಯವಹಾರದಲ್ಲಿ ನಿಷ್ಣಾತರಾಗಿದ್ದು ಇರುವ ನೀವೇ ಹೀಗೆಂದರೆ ನಾವು ಹೇಳತಕ್ಕದ್ದೇನು ಉಳಿಯಿತು?'

'ಹಾಗಾದರೆ ನಾನಿವಳನ್ನು ಮುಂಚೆ ಮದುವೆಯಾಗಿದ್ದೇನೆಯೋ?'

'ಅಹಾ! ಗೈದಕಾರ್ಯಕ್ಕೇ ದೋಷವನ್ನೆಣಿಸುವೆಯಾ? ಧರ್ಮಕ್ಕೆ ಪರಾಙ್ಮುಖನಾಗಿರುವೆಯಾ? ಧರ್ಮನಿಂದೆಯನ್ನು ಮಾಡಿದೆಯಲ್ಲ!'

'ಎಲೈ ಋಷಿಕುಮಾರನೆ, ಇಲ್ಲದುದನ್ನು ಆರೋಪಿಸಬೇಡ'.

'ಭಲೆ! ಇಂತಹ ವಿಕಾರಗಳು ಐಶ್ವರ್ಯಮತ್ತರಲ್ಲಿ ತಾನೆ ತೋರುವುವು.'

ಹಿಮಾಲಯದ ತಪ್ಪಲಿನ ಕಣ್ವ ಮಹರ್ಷಿಯ ಸಂದೇಶವಾಹಕರೆಂದು ಇಟ್ಟುಕೊಂಡು ಜೋಲುಗಡ್ಡದ ಪ್ರದರ್ಶನದಿಂದ ವಂಚಿಸಬೇಕೆಂದಿರುವವರು ತನ್ನನ್ನು ಧರ್ಮಬಾಹಿರನೆಂದೂ ನೀತಿಭ್ರಷ್ಟನೆಂದೂ ಮನಸ್ವಿಯಾಗಿ ತೆಗಳಬೇಕಾದರೆ, ಭಾರತಚಕ್ರವರ್ತಿಯಾದ ದುಷ್ಯಂತಮಹಾರಾಜನು ಮಾಡಿದ ಪಾಪವಾದರೂ ಯಾವುದಿರಬೇಕು? ಇಲ್ಲದಿದ್ದರೆ, ಕಾಡಾಡಿಯಾದ ಋಷಿಕುಮಾರನೊಬ್ಬನು ಅರಸನನ್ನು ಧಿಕ್ಕರಿಸಲು ಶಕ್ತನಾಗಿದ್ದನೆ? ಶಕುಂತಳೆಯನ್ನು ಕಂಡ ನೆನಪು ತನಗಿಲ್ಲ, ಅವಳೊಡನೆ ಸಂಸರ್ಗವನ್ನು ಮಾಡಿದ ಸ್ಮರಣೆಯಂತಿರಲಿ. ಹಾಗಿರುವಾಗ ಕಣ್ವಮಹರ್ಷಿಯ

ಮಾತೆಂದು ನಂಬಿ, ಋಷಿಕುಮಾರನು ಹುಸಿಯಾಡನೆಂದು ಎಣಿಸಿ, ಜನಾಪವಾದಕ್ಕೆ ಗುರಿಯಾಗಬೇಕೆ? ಅರಸರು ದುರ್ವಾಸನಂತಹ ಋಷಿಗಳ ಶಾಪಕ್ಕೆ ಹೆದರುವುದಿಲ್ಲ; ಆದರೆ ಜನಾಪವಾದಕ್ಕೆ ಗುರಿಯಾಗಲು ಇಚ್ಛಿಸುವುದಿಲ್ಲ. ಶಾರ್ಙ್ಗರವನು ದುಷ್ಯಂತನಲ್ಲಿ ಕೋಪಗೊಂಡಿದ್ದನು; ಗೌತಮಿಯಾಗ ಮುಂದೆ ಬಂದು—

'ಮಗಳೆ! ನಿನ್ನ ಗಂಡನು ನಿನ್ನನ್ನು ಮರೆತಿರುವನು; ತುಂಬಿಯು ಮರೆಯುವುದು ಸಹಜವು. ಆದರೆ, ಒಂದು ಮುಹೂರ್ತ ಲಜ್ಜೆಪಡದಿರು; ನಿನ್ನ ಅವಗುಂಟನವನ್ನು ತೆಗೆದು ಬಿಡುವೆನು,' ಎಂದು ಮಗಳ ಮುಸುಕನ್ನು ತೆಗೆದಳು. ಕಪ್ಪು ಮೋಡಗಳು ಒಂದಕ್ಕೊಂದು ಘರ್ಷಿಸಿ ಭಿನ್ನವಾದೊಡನೆಯೆ ಮಿಂಚಿನಬಳ್ಳಿ ಹೊಳೆಯುವಂತೆ, ನಿರ್ದುಷ್ಟವಾದ ಕಾಂತಿಯೊಂದು ತೋರಿ ಅರಸನನ್ನು ಬೆರಗುಪಡಿಸಿತು. ಎಳಗಬ್ಬದವಳ ಮುಖವು ಚಂದವೆಂಬುದು ಸರ್ವಜ್ಞ ಕವಿಯ ಮಾತು. ಅಂತಹ ರೂಪವನ್ನು ಆತನು ಮುಂಚೆ ನೋಡಿದವನಲ್ಲ; ಅಂತಹ ಬಳ್ಳಿಗಳು ರಾಜಧಾನಿಯ ಉದ್ಯಾನದಲ್ಲಿಯೂ ಇಲ್ಲವೆನ್ನಬಹುದು. ಶಕುಂತಳೆಯ ಮುಖವನ್ನು ಕಂಡೊಡನೆಯೆ ಹಿಂದೆ ಹಂಸಪದಿಕೆಯ ಮಧುರ ಗೀತಿಯನ್ನು ಕೇಳಿದಾಗ ಮನಸ್ಸು ಕಳವಳಗೊಂಡಂತೆ, ಈಗ ರಮಣೀಯವಾದ ರೂಪವನ್ನು ಕಂಡು ಆತನ ಮನಸ್ಸು ಸಂಶಯಕ್ಕೊಳಗಾಯಿತು. ಜನ್ಮಾಂತರದ ಕಥೆಯೋ ಇದು ಎಂಬಂತೆ ವಿಸ್ಮಯಪಟ್ಟನು.

ಕಣ್ವಪುತ್ರಿಯನ್ನು ಮದುವೆಯಾದ ನೆನಪು ಆತನಿಗಿದ್ದಿಲ್ಲ. ಕಣ್ವಪುತ್ರಿಯನ್ನು ಕಂಡು ಮಾತಾಡಿಸಿದುದೂ ಇಲ್ಲ. ಆದರೆ, ಹೀಗೆಂದು ಮನಸ್ಸಿಗೆ ನಿಶ್ಚಯವಿದ್ದರೂ, ಸಂಶಯದ ಕೀಟವು ಮನಸ್ಸನ್ನು ಕೊರೆಯುತ್ತಿತ್ತು. ಎಂತಹ ಅಪೂರ್ವವಾದ ಚೆಲುವಿದು? ಬಳಿಗೈದುದರಿಂದ ಸ್ವೀಕರಿಸಲೆ? ಸ್ವೀಕರಿಸೆಂದು ಮುನಿಪುತ್ರನ ಒತ್ತಾಯವಿದೆ. ಸ್ವೀಕರಿಸಲಿಲ್ಲವೆಂದು ಸಿಟ್ಟಿದೆ.

ಇಲ್ಲ, ಸ್ವೀಕರಿಸಲು ಸಾಧ್ಯವಿಲ್ಲ; ಧರ್ಮಬಾಹಿರನಾಗುವುದು ಪುರುವಂಶದವರಿಗೆ ಸಲ್ಲದ ಮಾತು. ವಿವಾಹವೆಂಬುದು ಇಚ್ಛೆಯ ವಿಷಯವಲ್ಲ. ಅದೊಂದು ಸ್ವರ್ಗೀಯ ಪಾಶವು! ಅದೊಂದು ಸಂಸಾರದ

ಬಂಧನವು!! ಅರಸನ ಮನಸ್ಸು ಹಿಂಜರಿಯಿತು. ಕುಂದಪುಷ್ಪದಲ್ಲಿ ಸವಿಜೇನಿದ್ದರೂ, ತುಂಬಿ ಹೂವಿಂದ ದೂರಕ್ಕೋಡಿತು. ಕಾರಣ, ಪ್ರಾತಃ ಕಾಲದ ಮಂಜು ಅದರಲ್ಲಿ ತುಂಬಿತ್ತು. ಆ ಮಂಜು ತುಂಬಿಗೆ ಮೃತ್ಯು! ಆದರೆ ಮಂಜಿನ ಅಡಿಯಲ್ಲಿ ಆ ತುಂಬಿಯೊಳಸುವ ಜೇನುಂಟು; ಜೇನು ತಾನೆ ಸವಿಯುಂಟು. ಹೇಗೆ ಇಂತಹ ಹೂವನ್ನು ಬಿಟ್ಟು ತೆರಳಲು ತುಂಬಿಗೆ ಸಾಧ್ಯವಾಗುವುದಿಲ್ಲವೊ, ಹಾಗೆಯೆ ಬಳಿಗೈದು ಬಂದ ರೂಪವತಿ ಯನ್ನು ಅನುಭೋಗಿಸಲಿಕ್ಕೂ ಬಿಟ್ಟುಬಿಡಲಿಕ್ಕೂ ಅರಸನಿಗೆ ಸಾಧ್ಯವಾಗ ಲಿಲ್ಲ. ಅವನು ದಿಙ್ಮೂಢನಾದನು. ಮುಖವನ್ನು ತಗ್ಗಿಸಿದನು. ಶತ್ರುಗಳಿಗೆ ಮಣಿಯದ ಅರಸು ಕುಗ್ಗಿದನು; ಋಷಿಗಳನ್ನು ಸನ್ಮಾನಿಸಿ ದಣಿಯದ ಅರಸು ಬೇಸರದಿಂದ ಬಳಲಿದನು.

ಮುಖವನ್ನು ತಗ್ಗಿಸಿ ಕೂತ ರಾಯನನ್ನು ಕಂಡು ಶಾರ್ಙ್ಗರವನು 'ಎಲೈ ರಾಯನೆ, ಇದೇನು ಮೌನ ತಾಳಿದೆ?' ಎಂದು ಗುಡುಗಿದನು.

'ಎಲೈ ತಪಸ್ವಿಯೆ, ಬಹಳ ಯೋಚಿಸಿದೆನು, ಆದರೆ ಈಕೆಯನ್ನು ಸ್ವೀಕರಿಸಿದ ಸ್ಮರಣೆ ನನಗೆ ಬರುವುದಿಲ್ಲ. ಗರ್ಭಚಿಹ್ನೆಯುಳ್ಳವಳನ್ನು ನಾನೆಂತು ಪರಿಗ್ರಹಿಸಲಿ?' ಎಂದು ರಾಜನು ವಾದಿಸಿದನು.

'ನೀನು ಕಳ್ಳನಂತೆ ಬಂದು ಮುಟ್ಟಿದಂತಹ ಪುತ್ರಿಯನ್ನು ಅಭಿನಂದಿಸಿ ನಿನ್ನಡೆಗೆ ಕಳುಹಿಸಿದ ಮುನಿಗೊಂದು ಅವಮಾನವಾಯಿತು; ಕದ್ದೊಡವೆ ಯನ್ನು ಕದಿಯಲಿಲ್ಲವೆನ್ನದಿರು; ಧನಿಕನಿಗಿದು ಬೇಡ.'

ಶಾರ್ಙ್ಗರವನ ಕೋಪವು ತುತ್ತತುದಿಗೇರಿತ್ತು. ಅರಸನನ್ನು ಮುಂಚೆ ಧರ್ಮಬಾಹಿರನೆಂದಿದ್ದನು; ಈಗ ಕಳ್ಳನೆಂದು ಸಂಬೋಧಿಸಿದನು. ಕಳ್ಳ ರನ್ನು ಶಿಕ್ಷಿಸುವವನೆ ಕಳ್ಳನಾದರೆ, . . . . . . . . ? ಮತ್ತೇನು ಉಳಿಯಿತು? ಶಾರದ್ವತನು ಬಳಿಯಲ್ಲೆ ನಿಂತಿದ್ದನು. ಅವನು ಮುಂಗೋಪಿಯಲ್ಲ. ಶಾಂತ ಸ್ವಭಾವದವನು. ಮುಂದಕ್ಕೆ ಬಂದು ಮೇರೆತಪ್ಪಿ ಮಾತಾಡುವ ಶಾರ್ಙ್ಗ ರವನನ್ನು ತಡವರಿದು, 'ಅಣ್ಣ ಶಾರ್ಙ್ಗರವ, ನೀನೀಗ ಸುಮ್ಮನಿರು' ಎಂದು ಹೇಳಿ, ಶಕುಂತಳೆಯೆಡೆಗೆ ತಿರಿಗಿ,—'ಎಲಾ ಶಕುಂತಳೆಯೆ, ಹೇಳಬೇಕಾದು

ದನ್ನು ನಾವು ಹೇಳಿಬಿಟ್ಟೆವು. ನಿನ್ನನ್ನು ವರಿಸಿದವನು ಹೀಗೆ ಹೇಳುತ್ತಾನೆ; ಆತನಿಗೆ ನಂಬಿಸಲಿಕ್ಕೆ ಸಾಧ್ಯವಿದ್ದರೆ ನಂಬಿಸಿಬಿಡು,' ಎಂದು ಸ್ಪಷ್ಟವಾಗಿ ನಿಂತುಬಿಟ್ಟನು.

ಶಕುಂತಳೆಯು ಇಷ್ಟು ಹೊತ್ತಿಗೂ ಸುಮ್ಮನಿದ್ದಳು. ಅರಮನೆಯನ್ನು ಪ್ರವೇಶಿಸುವಾಗ ಏನೋ ಕಾರಣದಿಂದ ಆಕೆಯ ಮನಸ್ಸು ಕಳವಳ ಪಡುತ್ತಿತ್ತು. ಅನಂತರ ಮಹಾರಾಜನಿಗೆ ಮದುವೆಯಲ್ಲಿ ಸಂಶಯವಾದ ಮೇಲೆ ಬಹಳ ದೂರಕ್ಕೆ ಹತ್ತಿದ್ದ ಆಕೆಯ ಆಶೆಯು ಬಿಮ್ಮನೆ ಮುರಿದು ಬಿಟ್ಟಿತ್ತು. ಮಾಲಿನಿಯ ತೀರದಲ್ಲಿರುವಾಗ ಯಾವ ಅನುರಾಗವನ್ನು ಪ್ರಿಯನು ಆಕೆಗೆ ತೋರಿಸುತ್ತಿದ್ದನೊ, ಅದೀಗ ಗಂಗೆಯ ತೀರವನ್ನು ದಾಟಿ ದೊಡನೆಯೆ ಅವಸ್ಥಾಂತರವನ್ನು ಹೊಂದುವಾಗ, ನೆನಪು ಹುಟ್ಟಿಸಿ ಪ್ರಯೋ ಜನವಾದರೂ ಏನಿರಬಹುದು? ನಿದ್ದೆಯಲ್ಲಿದ್ದವನನ್ನು ಎಬ್ಬಿಸಬಹುದು; ನಿದ್ದೆ ನಟಿಸುವವನನ್ನು ಎಬ್ಬಿಸುವವರಾರು? ತಾನು ದುಃಖಭಾಗಿನಿಯಾದ ಳೆಂದು ಶಕುಂತಳೆ ಬಹಳ ಚಿಂತಿಸಿದಳು. ಶಾರದ್ವತನೀಗ ಎಲ್ಲ ಭಾರ ವನ್ನು ತನ್ನ ತಲೆಯ ಮೇಲಿರಿಸಿದ ಕಾರಣ, ರಾಜನಿಗೆ ಇದಿರಾಗಿ 'ಆರ್ಯಪುತ್ರನೆ' ಎಂದು ಸಂಬೋಧಿಸಿದಳು. ಶಕುಂತಳೆಗೆ ರೀತಿನೀತಿಗಳು ಚೆನ್ನಾಗಿ ಗೊತ್ತು. ಮದುವೆಯಲ್ಲೆ ಸಂದೇಹ ಬಂದಾಗ ಗಂಡನನ್ನು ಆರ್ಯಪುತ್ರನೆಂದು ಕರೆಯುವುದು ಉಚಿತವಲ್ಲೆಂದು ಎಣಿಸಿದಳು. 'ಅಲ್ಲ, ಎಲೈ ಪುರುಕುಲೋತ್ಪನ್ನನೆ, ಆಶ್ರಮಕ್ಕೆ ಬಂದು, ನಿಷ್ಕಪಟಿಯಾದ ಈ ಮುಗ್ಧೆ ಯನ್ನು ವಿಶ್ವಾಸಪೂರ್ವಕವಾಗಿ ನಂಬಿಸಿ, ಇಂತಹ ಕಠಿನೋಕ್ತಿಗಳಿಂದ ತಿರಸ್ಕರಿಸಿ ವಂಚಿಸುವುದು ಧರ್ಮಸಮ್ಮತವೆ? ಅಹಾ!' ಎಂದು ಮುಂದ ರಿಸಿದಳು.

ರಾಜನಾಗ ತನ್ನ ಕಿವಿಗಳನ್ನು ಮುಚ್ಚಿದನು. 'ಶಾಂತಂ ಪಾಪಂ, ಶಾಂತಂ ಪಾಪಂ! ತೀರದ ಮಣ್ಣನ್ನು ಕೊರೆದು, ಅಲ್ಲಿದ್ದ ಮರವನ್ನು ಬೀಳಿಸಿ ತಾನೂ ಕಳಂಕವಾಗುವ ತೊರೆಯ ನೀರಿನಂತೆ ನನ್ನನ್ನು ನರಕಕ್ಕೆ ಇಳಿಸಿ, ಹೆಂಗಸೆ, ಹಾಳಾಗಬೇಡ,' ಎಂದು ಶಕುಂತಳೆಯನ್ನು ಅರಸನು ಗದರಿಸಿಬಿಟ್ಟನು.

'ಆಗಲಿ, ನನ್ನನ್ನು ಪರಸ್ತ್ರೀಯೆಂದು ಎಣಿಸುವೆ. ಇಕೋ, ಈ ಗುರುತಿನ ಆಭರಣವನ್ನು ತೋರಿಸುವೆನು. ಹಾಗಾದರೂ ಸಂದೇಹವು ಪರಿಹಾರವಾಗಬಹುದು,' ಎಂದು ಶಕುಂತಳೆ ಧೈರ್ಯದಿಂದ ಅರಸನಿಗೆ ಹೇಳಿದಳು.

ಹೀಗೆಂದ ಶಕುಂತಳೆ ಕೈಮುಟ್ಟಿದಳು. ಬೆರಳನ್ನು ಹುಡುಕಿದಳು. ಅರಸನು, 'ಇದೀಗ 'ಒಪ್ಪತಕ್ಕದ್ದೆ'ಂದನು. ಆದರೆ, ಧಿಕ್ ಧಿಕ್, ಹಸ್ತಿನಾ ವತಿಗೆ ಮಹಾರಾಜನೂ ಸಮಸ್ತಭಾರತಕ್ಕೆ ಏಕಚ್ಛತ್ರಾಧಿಪತಿಯೂ ಆದ ದುಷ್ಷಂತ ರಾಜನು ಮಾಲಿನಿಯ ತೀರದಲ್ಲಿ ತನ್ನ ಪ್ರೀತಿಯ ಮಡದಿಯ ಬೆರಳಿಗೆ ಇಟ್ಟ ನಾಮಾಂಕಿತದ ಉಂಗುರವು ಬೆರಳಲ್ಲಿಲ್ಲ! ಆಶ್ರಮದಿಂದ ಹೊರಡುವಾಗ 'ಅರಸನು ನಿನ್ನನ್ನು ಗುರುತಿಸಿಲ್ಲವಾದರೆ, ಈ ಉಂಗುರ ವನ್ನು ತೋರಿಸು' ಎಂದು ಸಖಿಯರು ಸೂಚನೆಯಿತ್ತು ತೋರಿಸಿದ ಉಂಗುರವು ಬೆರಳಿಗಿಲ್ಲ; 'ಹಾ, ಹಾ, ನನ್ನ ಬೆರಳಿನ ಉಂಗುರವಿಲ್ಲವಲ್ಲಾ!' ಎಂದು ದುಃಖದಿಂದ ಗೌತಮಿಯನ್ನು ಅವಳು ನೋಡಿದಳು. ಗೌತಮಿ ಯಾಗ ಅವಳಿಗೆ ಕಾಣಲಿಲ್ಲ. ವಿಶ್ವವವಳಿಗೆ ತೋರಲಿಲ್ಲ. ದೇಹದಲ್ಲಿದ್ದ ಜೀವವೆಲ್ಲ ಕಂಬನಿಯಾಗಿ ಸುರಿಯಿತು. ಮುದುಕಿ ಮಗಳ ಕಣ್ಣನ್ನೊರಸಿ, ಮೈತಬ್ಬಿ, 'ಮಗಳೆ, ದುಃಖಿಸಬೇಡ. ಶಕ್ರಾವತಾರದಲ್ಲಿ ಶಚೀತೀರ್ಥ ವನ್ನು ವಂದಿಸುವಾಗ ನೀರಿನಲ್ಲಿ ಉಂಗುರವು ಜಾರಿತು. ಗಂಡಸರ ಉಂಗುರವಲ್ಲವೆ ಅದು?' ಎಂದು ಸಂತಯಿಸಿದಳು. ಮುದುಕಿಯು ಹಲ್ಲಿಲ್ಲದ ಬಾಯಿಂದ ಬಿಸಿ ಬಿಸಿ ಮಾತುಗಳನ್ನು ಕೇಳಿ ಅರಸನು ನಕ್ಕು ಬಿಟ್ಟನು; ನಕ್ಕೇ ಬಿಟ್ಟನು. ಸ್ತ್ರೀಯರು ಪ್ರತ್ಯುತ್ಪನ್ನಮತಿಗಳೆಂಬುದು ಸುಳ್ಳಲ್ಲವೆಂದನು; ಲೋಕದ ಅನುಭವವು ಸುಳ್ಳಾಗುವುದುಂಟೆ?

ಮಹಾಸಾಗರದ ಅಲೆಗಳ ಮಧ್ಯದಲ್ಲಿ, ನಿರಾಶೆಯ ಆಕಾಶದ ಅಡಿ ಯಲ್ಲಿ, ಬಂಡೆಗಳ ಸಂಕುಲದ ಸೆರೆಯಲ್ಲಿ ತೇಲುವ ತೆಪ್ಪವನ್ನು ಹತ್ತಿದ ಶಕುಂತಳೆ ದಿಗ್ಭ್ರಾಂತಳಾದಳು. ಗುರುತಿನ ಧ್ರುವತಾರೆ ಕಾಣುತ್ತಿದ್ದಿಲ್ಲ; ನಶ್ವರವಾದ ಭೂಮಿಯಂತೆ. ಆದರೆ ಶಬ್ದವು ನಶ್ವರವಲ್ಲ. ಆತನು ಹಿಂದೆ ತನಗೆಂದ ಮಾತನ್ನು ನಿರೂಪಿಸುವೆನೆಂದಳು. ಮುಳುಗುವವರು ಹುಲ್ಲನ್ನೇ ಆಧಾರವಾಗಿ ಹಿಡಿಯುವಂತೆ ಹಿಂದಿನ ಕಥೆಯನ್ನು ಹೇಳುವೆನೆಂದಳು.

'ನೋಡತಕ್ಕದೆಂತೂ ಆಯಿತು; ಇನ್ನು ಕೇಳತಕ್ಕದ್ದು ಉಳಿಯಿತು,' ಎಂದು ಅರಸನು ಕೊಂಕು ಮಾತಾಡಿದನು.

'ಒಂದು ದಿನ ನಾವು ಲತಾಗೃಹದ ನೆರಳಲ್ಲಿ ಕೂತಾಗ, ನೀರು ತುಂಬಿದ ಕಮಲ ಪತ್ರದ ಪಾತ್ರೆಯು ನಿನ್ನ ಕೈಯಲ್ಲಿತ್ತು. ಆಗ . . . .'

'ಆ ಮೇಲೆ'

'ಆಗ ದೀರ್ಘಾಪಾಂಗನೆಂಬ ನನ್ನ ಜಿಂಕೆಮರಿಯು ದೀರ್ಘೋಚ್ಛ್ವಾಸಗಳನ್ನು ಎಳೆಯುತ್ತ ನಮ್ಮೆಡೆಗೆ ಬಂದಿತು. ನೀನಾಗ ದಯೆಯಿಂದ 'ಮೊದಲು ಇದು ನೀರು ಕುಡಿಯಲಿ' ಎಂದು ಜಲಪಾತ್ರೆಯನ್ನು ಮುಂದು ತೋರಿಸಲಿಲ್ಲವೆ? ಆದರೆ, ಅದು ನಿನಗೆ ಅಪರಿಚಿತವಾದುದರಿಂದ ನಿನ್ನ ಸಮೀಪಕ್ಕೆ ಬರಲಿಲ್ಲ. ಅನಂತರ ಅದೇ ಪಾತ್ರೆಯನ್ನು ನಿನ್ನ ಕೈಯಿಂದ ಪಡೆದುಕೊಂಡು ನಾನು ಹಿಡಿದುಕೊಂಡಾಗ ಬಳಲಿದ ಹುಲ್ಲೆಮರಿ ಹಾರಿ ಬಂದು ನೀರನ್ನು ಕುಡಿದುಬಿಟ್ಟಿತು. ನೀನಾಗ ನಕ್ಕು ಬಿಟ್ಟು 'ನೀವಿಬ್ಬರೂ ಕಾಡಾಡಿಗಳು; ಆದ್ದರಿಂದ ನಿಮ್ಮೊಳಗೆ ವಿಶ್ವಾಸವಿದೆ'ಂದು ನನಗೆ ಹಾಸ್ಯ ಮಾಡಿದ ನೆನಪಿದೆಯೆ?'

'ಹೀಗೆ ತಾನೇ ತಮ್ಮ ಕಾರ್ಯವನ್ನು ಸಾಧಿಸುವುದಕ್ಕಾಗಿ ಹೆಂಗಸರು ಮಧುವಿನಂತೆ ಮಧುರವಾದ ಅನೃತವಚನಗಳಿಂದ ಕಾಮಿಗಳನ್ನು ಸೆಳೆದು ಬಿಡುವರು,' ಎಂದು ಅರಸನು ಮೂಗು ಮುರಿದುಕೊಂಡನು.

ಅರಸನ ಮಾತು ಮುದುಕಿಯ ಹೃದಯಕ್ಕ ನಾಟಿತು. ತಾವು ಯಾರು? ಮಹರ್ಷಿಯಾದ ಕಣ್ವನ ಆಶ್ರಮವಾಸಿಗಳು. ಶಕುಂತಳೆಯು ದುಷ್ಯಂತನನ್ನು ವರಿಸಿದ ಸಂಗತಿಯು ಮೊದಲು ಆಕೆಗೆ ತಿಳಿಯದಿದ್ದರೂ ಆತನು ಶಕುಂತಳೆಗಿತ್ತ ಉಂಗುರವನ್ನು ಕಂಡಿದ್ದಳು; ಕಂಡು ಕಣ್ಣಿರಳಿಸಿದ್ದಳು. ಶಕುಂತಳೆಯಲ್ಲಿ ಆಕೆಗೆ ವಿಶ್ವಾಸವಿದ್ದಿತು. ಆಕೆಯು ಮುಂದೆ ಬಂದು 'ಮಹಾರಾಜನೆ, ಹೀಗೆ ಹೇಳುವುದು ನಿನಗಂದುದಲ್ಲ. ತಪೋವನದಲ್ಲಿ ಬೆಳೆದ ಮಗುವಿದು ಕಪಟವನ್ನು ಅರಿತವಳಲ್ಲ,' ಎಂದು ಬೇಸರದಿಂದ ಅರಸನಿಗೆಂದಳು. 'ಎಲಾ ಮುದಿತಾಪಸಿಯೆ, ಹೆಣ್ಣು ಹಕ್ಕಿಗಳಿಗೂ ಕೌಶಲವೆಂಬುದು ಕಲಿಸದೆ ಬರುವುದು. ಮತ್ತೆ ಬುದ್ಧಿ ಬಂದ

ಇಂತಹ ಹೆಣ್ಣುಗಳ ಮಾತೇನು? ಕೋಗಿಲೆಯು ತನ್ನ ಮರಿಯನ್ನು ಕಾಗೆಗಳ ಗೂಡಿನಲ್ಲಿ ರಕ್ಷಿಸುವುದನ್ನು ಕೇಳಿಲ್ಲವೇ ನೀನು?' ಎಂದು ಅರಸನು ಮುದುಕಿಗೆ ಪ್ರತ್ಯುತ್ತರವಿತ್ತನು.

ಅರಸನ ಈ ಮಾತನ್ನು ಕೇಳಿ ಶಕುಂತಳೆಗೆ ಕೋಪ ಬಂದಿತು. ಅವಳ ಕಣ್ಣು ಕೆಂಪೇರಿತು. ಹುಬ್ಬು ಮುರಿಯಿತು. ಬೆವರಿಳಿಯಿತು. 'ಅನಾರ್ಯ! ನಿನ್ನ ಹೃದಯಾನುಮಾನದಿಂದ ನನ್ನನ್ನು ಎಣಿಸಿ ಮಾತಾಡುವೆಯಾ? ಹುಲ್ಲು ಮುಸುಕಿದ ಬಾವಿಯಂತೆ ಧರ್ಮಕಂಚುಕವನ್ನು ತೊಟ್ಟು ಬಂದ ನಿನಗೆ ಯಾವ ಮನುಷ್ಯನು ಸದೃಶನಾಗುವನು?' ಎಂದವಳು ಗಡಗಡನೆ ಗುಡುಗುವಾಗ ಅವಳ ನಿಷ್ಕಪಟತೆಯ ಮಿಂಚು ಅರಸನನ್ನು ಬೆರಗು ಮಾಡಿತು. ಮದನನ ಧನುಸ್ಸು ಮುರಿಯುವುದಿಲ್ಲ. ಹಿಂದೆ ಮದನನು ದಗ್ಧನಾದರೂ ಆತನ ಧನುಸ್ಸು ಕೃತಕೃತ್ಯವಾಗಿತ್ತು. ಆಕೆಯ ಮುರಿದ ಹುಬ್ಬು ಮದನನ ಮುರಿದ ಬಿಲ್ಲಿನಂತೆ ತೋರುತ್ತಿದ್ದಿತು. ಇದನ್ನು ನೋಡಿ ಅರಸನಿಗೆ ಸ್ವಲ್ಪ ಸಂಶಯವಾಯಿತು; ತಾನೆಲ್ಲವನ್ನು ಮರೆತಿರಬಹುದೆಂದು ಊಹಿಸಿದನು. ಆದರೆ ಯಾವ ಕಾರಣಕ್ಕಾಗಿ ಮರೆಯಬೇಕು? ಶಕುಂತಳೆಗಾತನು ಕನಿಕರದಿಂದ ಹೀಗೆಂದನು—'ಎಲೌ ಮಂಗಳಾಂಗಿಯೆ, ದುಷ್ಷಂತನ ಚರಿತ್ರವು ಪ್ರಸಿದ್ಧವಾದುದು. ಆದರೆ, ನಿನ್ನನ್ನು ಮದುವೆಯಾದ ಅರಿವಿಲ್ಲವಲ್ಲ?' 'ಮುಖದಲ್ಲಿ ಮಧುವನ್ನೂ ಹೃದಯದಲ್ಲಿ ವಿಷವನ್ನೂ ಇಟ್ಟ ಈತನ ಕೈ ಹಿಡಿದ ನಾನು ಸ್ವಚ್ಛಂದಚಾರಿಣಿಯಾದೆನಲ್ಲವೆ?' ಎಂದು ಶಕುಂತಳೆಯು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಅತ್ತಳು.

ತಂಗಿ ಅಳುವುದನ್ನು ಕಂಡು ಸಮೀಪವೇ ನಿಂತ ಶಾರ್ಙ್ಗರವನು 'ತಾನು ಮಾಡಿದ ಕರ್ಮಕ್ಕೆ ಅಳುವಳು. ಆದುದರಿಂದಲೇ ಸ್ನೇಹವೆಂಬುದನ್ನು ಪರೀಕ್ಷಿಸಿ ಮಾಡತಕ್ಕದ್ದು; ಇಲ್ಲದಿದ್ದರೆ, ಸ್ನೇಹವೇ ವೈರವಾಗಿ ಪರಿಣಮಿಸುವುದು,' ಎಂದು ಅರಸನಿಗೆ ವಾಗ್ಬಾಣವನ್ನು ಬಿಟ್ಟನು.

ಈ ಋಷಿಗಳು ಶಕುಂತಳೆಯ ಮಾತನ್ನೆ ನಂಬಿ, ತನ್ನನ್ನು ದೂಷಿಸುವರೆಂದು ದುಷ್ಷಂತನು ಅರಿತುಕೊಂಡನು. ಆತನು ಶಾರ್ಙ್ಗರವನ

ಗೆಂದನು-ಎಲೈ ತಪಸ್ವಿಯೆ, ಈಕೆಯನ್ನೆ ನಂಬಿ, ಪ್ರಸಿದ್ಧಚರಿತನಾದ ನನ್ನನ್ನು ದೂಷಿಸ ಬೇಡ.

ಶಾರ್ಙ್ಗರವ—ಏನು? ನಾವು ನಿನ್ನನ್ನು ದೂಷಿಸಿದೆವೆನ್ನುವಿಯಾ? ಯಾವಾಕೆ ಜನ್ಮಪ್ರಭೃತಿ ಮರಿಮೋಸವೆಂಬುದನ್ನು ಕೇಳ್ದರಿಯಳೋ ಆಕೆಯ ಮಾತು ಅಪ್ರಮಾಣವೆಂದಾದರೆ, ಪರವಂಚನೆಯನ್ನು ವಿದ್ಯೆಯೆಂದು ಅಭ್ಯಾಸ ಮಾಡುವವರು ಸತ್ಯವಚನಿಗಳಲ್ಲವೆ? ಭಲೆ! ಸಾಕುಮಾಡು, ಸಾಕುಮಾಡು.

ಅರಸನು—ಎಲೇ ಸತ್ಯವಾದಿಯೆ, ನೀನೆಂದಂತೆ ನಾವೇ ವಂಚಕರಿರ ಬಹುದು. ಈಕೆಯನ್ನು ಬೇರೆ ವಂಚಿಸಿ ನಮಗೆ ಬರತಕ್ಕದ್ದೇನು?

ಶಾರ್ಙ್ಗರವ—ವಿನಿಪಾತವು!

ಅರಸನು—ಪುರುಕುಲೋತ್ಪನ್ನರು ವಿನಿಪಾತವನ್ನು ಬಯಸುವ ರೆಂಬುದನ್ನು ನಂಬಲಾಗದು.

ಶಾರ್ಙ್ಗರವನು ಕೋಪದಿಂದ ಕಿಡಿಯಾಗಿದ್ದನು. ತಿರಿಗೊಮ್ಮೆ ಆತನ ಸಹಪಾಠಿ ಶಾರದ್ವತನು ಮುಂದಕ್ಕೆ ಬಂದು, 'ಅಣ್ಣ, ಪ್ರಶ್ನೋತ್ತರ ಗಳಿಂದ ಪ್ರಯೋಜನವೇನು? ಗುರುಗಳ ಸಂದೇಶವನ್ನಂತೂ ತಿಳಿಸಿರುವೆವು. ಸುಮ್ಮನಿರು. ರಾಜನೆ, ನಾವು ಹೊರಟುಹೋಗುವೆವು. ನೋಡು, ಈಕೆ ನಿನ್ನ ಮಡದಿ; ಈಕೆಯನ್ನು ಬಿಡುವುದಾದರೆ ಬಿಡು. ಸ್ವೀಕರಿಸುವೆಯಾ ದರೆ ಸ್ವೀಕರಿಸು. ಹೆಂಡಿರಲ್ಲಿ ಸರ್ವತೋಮುಖವಾದ ಪ್ರಭುತ್ವವಂತೂ ಗಂಡಂದಿಯರಿಗಿರುವುದಷ್ಟೆ?' ಎಂದು ತೀರ್ಮಾನಮಾಡಿದನು.

ಶಾರದ್ವತನು ಹೊರಟನು. ಶಾರ್ಙ್ಗರವನೂ ಆತನನ್ನು ಅನುಸರಿಸಿ ದನು. ಋಷಿಗಳೆಲ್ಲರೂ ಹಿಂಬಾಲಿಸಿದರು. ಗೌತಮಿ ಮಾತ್ರ ಕದಲ ಲಿಲ್ಲ; ಆಕೆ ಶಕುಂತಳೆಯೊಡನೆ ಇದ್ದಳು. ಶಾರದ್ವತನು ಗೌತಮಿಯನ್ನು ಕರೆದು, 'ಗೌತಮಿ, ಮುಂದಕ್ಕೆ ಹೋಗು,' ಎಂದೊಡನೆಯೆ ಅವಳೂ ನಡೆದುಬಿಟ್ಟಳು. ಶಕುಂತಳೆಯು ನಡುಗಿದಳು. ಕಪಟಿಯಾದ ಅರಸನು ತನ್ನನ್ನು ವಂಚಿಸಿದನೆಂದಳು. 'ಈ ಧೂರ್ತನಂತೂ ನನಗೆ ಮೋಸವಿತ್ತನು; ನೀವೂ ನನ್ನನ್ನು ಬಿಟ್ಟುಬಿಡುವಿರಾ?' ಎಂದು ಶಕುಂತಳೆ ತನ್ನ ಒಡನಾಡಿ

ಗಳ ಹಿಂದಕ್ಕೆ ನಡೆದಳು. ಶೋಕಾಕುಲೆಯಾಗಿ ತಮ್ಮ ಹಿಂದಕ್ಕೆ ನಡೆದು ಬರುತ್ತಿರುವ ಪುತ್ರಿಕೆಯನ್ನು ಕಂಡು ಗೌತಮಿ ನಿಂತಳು. ತಾಯಿಯಿಲ್ಲದ ಮಗುವನ್ನು ಹೊಟ್ಟೆಯ ಮಗುವನ್ನೆಂಬಂತೆ ಸಾಕಿಸಲಹಿದ್ದಳು. 'ವತ್ಸ ಶಾರ್ಙ್ಗರವ, ನಿಲ್ಲು. ಕೈ ಹಿಡಿದ ಗಂಡನೇ ಕ್ರೂರನಾಗಲು ನನ್ನ ಮಗು ಏನು ಮಾಡೀತು?' ಎಂದು ಕಣ್ವಶಿಷ್ಯನೊಡನೆ ಮುದುಕಿ ಬಿನ್ನವಿಸಿದಳು. ಮುನಿದ ಶಾರ್ಙ್ಗರವನು ಫಕ್ಕನೆ ಹಿಂತಿರುಗಿದನು.

ಶಕುಂತಳೆಯನ್ನು ದುರದುರನೆ ನೋಡಿ, 'ದೋಷದೃಷ್ಟಿಯುಳ್ಳ ಹೆಂಗಸೇ! ಏನು ಮಾಡುತ್ತಿರುವೆ? ಸ್ವಾತಂತ್ರ್ಯವನ್ನು ಅವಲಂಬಿಸಿದೆಯಾ?' ಎಂದು ಆತನು ಗುಡುಗಿಬಿಟ್ಟನು. ಶಕುಂತಳೆಯೊಮ್ಮೆಗೆ ದೃಷ್ಟಿಯನ್ನು ತನ್ನ ಗಂಡನೆಡೆಗೆ ಬೀರಿದಳು. ಆತನು ಮಾತೆತ್ತಲಿಲ್ಲ. ಮಂಜಿನ ಭರಕ್ಕೆ ಬಳಕುವ ಹೂವಿನಂತೆ ಶಕುಂತಳೆ ನಡುಗಿದಳು. ಶಾರ್ಙ್ಗರವನು ಮತ್ತೆ 'ಶಕುಂತಳೆ, ಅರಸಾಡಿದಂತೆ ನೀನು ದುಷ್ಟೆಯಾದರೆ, ತಂದೆಗೆ ಬಾಹಿರಳು. ಪರಿಶುದ್ಧೆಯಾದರೆ ಪತಿಕುಲದಲ್ಲಿ ದಾಸಿಯಾಗುವುದೂ ನಿನಗುಚಿತವು. ಆದ್ದರಿಂದ ನಿಲ್ಲು. ತೆರಳುವವರು ನಾವು,' ಎಂದು ತಂಗಿಗೆಂದನು. ಹೊರಟುಹೋಗುವ ಋಷಿಗಳನ್ನು ಕಂಡು, ಅರಸನು ಎದ್ದು, 'ಎಲೈ ತಪಸ್ವಿಗಳೆ, ಈಕೆಯನ್ನಿಲ್ಲಿ ಬಿಟ್ಟು ಹೋಗಬೇಡಿರಿ. ಚಂದ್ರನು ನೈದಿಲೆಯನ್ನೆ ಅರಳಿಸುವನು. ಸೂರ್ಯನು ಕಮಲವನ್ನೆ ವಿಕಾಸಗೊಳಿಸುವನು. ವಶಿಗಳಾದವರು ಪರಕಳತ್ರವನ್ನು ಕಣ್ಣೆತ್ತಿನೋಡರು,' ಎಂದು ಆಜ್ಞೆಯಿತ್ತನು. 'ನಿನಗೇನು ಹೆದರಿಕೆ? ಮತ್ತೊಬ್ಬಳ ಸಂಗದಿಂದ ಎಲ್ಲವನ್ನು ಮರೆತೆಯಾದರೆ ನಿನಗೇನು ಹೆದರಿಕೆ?' ಎಂದು ಹೇಳುತ್ತ ಹಿಂತಿರುಗದೆ ನಡೆದುಬಿಟ್ಟನು ಶಾರ್ಙ್ಗರವನು.

ಅರಸನಿಗೆ, ತಾನೆಲ್ಲವನ್ನು ಮರೆತಿರಬಹುದೊ ಈ ಶಕುಂತಳೆಯು ಹುಸಿಯಾಡುತ್ತಿದ್ದಿರಬಹುದೊ ಎಂಬುದು ತಿಳಿಯಲಿಲ್ಲ. ಆತನಿಗೆ ಅವಳನ್ನು ನಿರಾಕರಿಸಲೂ ಸ್ವೀಕರಿಸಲೂ ಸಾಧ್ಯವಾಗಲಿಲ್ಲ. ನಿರಾಕರಿಸಿದರೆ, ದಾರತ್ಯಾಗಿಯಾಗಬಹುದು; ಸ್ವೀಕರಿಸಿದರೆ ಪರಸ್ತ್ರೀಸ್ಪರ್ಶಪಾಂಸುಲನಾಗಬಹುದು. ಆತನು ಏನುಮಾಡಬೇಕೆಂದು ತೋಚದೆ ತನ್ನ ಪುರೋಹಿತನೊಡನೆ

ಇದರ ಗುರುಲಾಘವವನ್ನು ಕೇಳಿದನು. ಪುರೋಹಿತನು ಸ್ವಲ್ಪ ಆಲೋಚಿಸಿ ಶಕುಂತಳೆಯು ಹೆರುವವರೆಗೆ ತನ್ನಲ್ಲಿರಲೆಂದು ತನ್ನ ಅಭಿಪ್ರಾಯವನ್ನು ಹೇಳಿದನು. ಏಕೆಂದರೆ, ಅರಸನು ಚಕ್ರವರ್ತಿಗುಣೋಪೇತನಾದ ಪುತ್ರ ನನ್ನು ಪಡೆಯುವನೆಂಬುದು ಋಷಿವಚನವಿದ್ದಿತು. 'ಶಕುಂತಳೆಯ ಮಗನು ಸರ್ವಲಕ್ಷಣಸಂಪನ್ನನಾದರೆ ಈಕೆಯನ್ನು ರಾಣಿವಾಸಕ್ಕೆ ಸೇರಿಸುವುದು. ಇಲ್ಲದಿದ್ದರೆ ತವರಿಗೆ ಕಳುಹಿಸಿಕೊಡುವುದು,' ಎಂದು ಪುರೋಹಿತನು ನಿಷ್ಕರ್ಷೆಮಾಡಿದನು.

ಅರಸನು ಒಪ್ಪಿದನು. ಪುರೋಹಿತನು ಶಕುಂತಳೆಯನ್ನು ಸಂಗಡ ಕರಕೊಂಡು ಮನೆಯತ್ತ ತೆರಳಿದನು. ಗೌತಮಿಯು ಮತ್ತು ಮುನಿಶಿಷ್ಯರ ಗತಿ ಮುಂದೇನಾಯ್ತೆಂದು ತಿಳಿಸಲಾರೆವು. ಶಕುಂತಳೆಯೊಡನೆ ಬಂದವ ರಿಗೆ ಮೃಷ್ಟಾನ್ನಭೋಜನದ, ಅಭ್ಯಂಗಸ್ನಾನದ ಮನ್ನಣೆಯಾಗಬೇಕಿತ್ತು. ತವರಿನವರಿಗೆ ಅತ್ತೆ, ಭಾವ, ಎಂದು ಅರಸನು ಉಪಚರಿಸಬೇಕಿತ್ತು. ಉಪಚಾರವಿಲ್ಲ; ಊಟ ಉಡುಗೊರೆ ಇಲ್ಲ. ಬಂದವರು ಬಂದಂತೆಯೆ ತೆರಳಿದರು.

ಪುರೋಹಿತನೊಡನೆ ಶಕುಂತಳೆ ಬಿಕ್ಕಿಬಿಕ್ಕಿ ಅಳುತ್ತ ನಡೆಯುತ್ತಿದ್ದಳು. ತನ್ನ ತೋಳ್ಗಳನ್ನೆತ್ತಿ ತನ್ನ ಹತಭಾಗ್ಯವನ್ನು ಹಳಿಯುತ್ತ, 'ಎಲೈ ಭಗವತಿ ವಸುಧೆ, ನನಗೋಸ್ಕರ ಬಾಯ್ಮನ್ನು ತೆರೆ'ಯುಂದೆನ್ನುವಾಗ ಎಂತಹ ಹೃದಯವೂ ಕರಗುತ್ತಿತ್ತು. ಆಗ ತಾನೆ ಆಕಾಶದಿಂದ ಪ್ರಭಾಮಂಡಲವುಳ್ಳ ಜ್ಯೋತಿಯೊಂದು ಕೆಳಗಿಳಿದು ಶಕುಂತಳೆಯನ್ನು ಆಕಾಶಕ್ಕೆ ಒಯ್ದುಬಿಟ್ಟಿತು. ಈ ಅದ್ಭುತವನ್ನು ಕಂಡು ಎಲ್ಲವರೂ ಬೆಕ್ಕಸಬೆರಗಾದರು. ಅರಸನು ಈ ವರ್ತಮಾನ ಕೇಳಿ ನಿರ್ಲಿಪ್ತನಂತೆ ವರ್ತಿಸಿದನು. 'ನಾವಂತೂ ಅವ ಳನ್ನು ತಿರಸ್ಕರಿಸಿದವರು. ಸುಮ್ಮನೆ ತರ್ಕಮಾಡುವುದು ನಿಷ್ಫಲ'ವೆಂದು ಅರಸನೆಂದನು. ಹಾಗೆ ತನ್ನ ಮನಸ್ಸನ್ನು ಸಮಾಧಾನ ಮಾಡಿಕೊಂಡರೂ ಮನಸ್ಸಿಗೆ ಕಳವಳವಿತ್ತು. ಹಾಗಿದ್ದರೂ ತಾನು ನಿರ್ದೋಷಿಯೆಂದು ಮನಸ್ಸು ಅವನನ್ನು ನಂಬಿಸುತ್ತಿತ್ತು.

---

## ೧೦. ಪಟಪರಿವರ್ತನ



ದುಷ್ಯಂತ ಮಹಾರಾಜನು ಶಕುಂತಳೆಯನ್ನು ತಿರಸ್ಕರಿಸಿದ ಕೆಲವು ದಿವಸಗಳನಂತರ ಶಚೀತೀರ್ಥದ ಬೆಸ್ತನೊಬ್ಬನು ಉಂಗುರವೊಂದನ್ನು ರಾಜಧಾನಿಗೆ ಮಾರಲು ತಂದಿದ್ದನು. ಭಂಗಾರದ ಆ ಉಂಗುರದಲ್ಲಿ ವಜ್ರದಿಂದ ಕೆಲವು ಅಕ್ಷರಗಳು ಕೆತ್ತಿದ್ದುವು. ನಗರರಕ್ಷಕರು ಕೈಯಲ್ಲಿ ಅನರ್ಘವಾದ ಉಂಗುರವಿದ್ದ ಬೆಸ್ತನನ್ನು ಬಂಧಿಸಿದರು. ಕಳ್ಳನೆಂದು ಹೊಡೆದರು. ಬೆಸ್ತನು ತನಗೆ ಆ ಉಂಗುರವು ಸೇರಿದ ವಿಷಯವನ್ನು ಇದ್ದಂತೆ ವಿವರಿಸಿದರೂ, ಆ ಅಂಬಿಗನು ಅರಸನ ಉಂಗುರವಿದನ್ನು ಕದ್ದಿರಬೇಕೆಂದು ಅವರು ಎಣಿಸಿದ್ದರು. ಏಕೆಂದರೆ ಅದರಲ್ಲಿ 'ದುಷ್ಯಂತ ಮಹಾರಾಜ' ಎಂದು ಏಳಕ್ಷರಗಳ ಪ್ರಭಾಪಂಕ್ತಿಯಿದ್ದಿತು. ತಾನು ಶಚೀತೀರ್ಥದವನೆಂದೂ ಎಂದಿನಂತೆ ಮೀನು ಹಿಡಿಯುವಾಗ ಸಿಕ್ಕಿದ ಮೀನಿನ ಹೊಟ್ಟೆಯಲ್ಲಿ ಈ ಉಂಗುರವು ಸಿಕ್ಕಿತೆಂದೂ ತನ್ನನ್ನು ಕ್ಷಮಿಸಬೇಕೆಂದೂ ಅಂಗಲಾಚಿ ಬೆಸ್ತನು ಬೇಡಿಕೊಂಡನು. ಉಂಗುರದ ದುರ್ಗಂಧವಿನ್ನೂ ಮಾಸಿದ್ದಿಲ್ಲ. ಅದರ ಆಕೃತಿಯಂತೂ ವಿರೂಪವಾಗಿತ್ತು. ಬೆಸ್ತನು ಹೇಳುವಂತೆ ಇರಲೂ ಬಹುದೆಂದು ರಾಜದೂತರಿಗೆ ಕಡೆಗೆ ಅನ್ನಿಸಿತು. ಉಂಗುರವನ್ನು ಅರಸನಿಗೆ ತೋರಿಸಿ, ಮತ್ತೆ ಬೆಸ್ತನ ವಿಷಯದಲ್ಲಿ ಮುಂದರಿಸಬಹುದೆಂದು ರಾಜದೂತನು ರಾಜಸದನಕ್ಕೆ ನಡೆದನು.

ಉಂಗುರವನ್ನು ಕಂಡೊಡನೆಯೆ ಅರಸನ ಮನಸ್ಸಿನಲ್ಲಿ ಪಟಪರಿವರ್ತನವಾಯಿತು. ಕುಳಿತವನು ಎದ್ದು ನಿಂತು, 'ಆಹಾ! ಶಕುಂತಳೆಯೆ! ಏನನ್ಯಾಯವಾಯಿತು?' ಎಂದು ಕಣ್ಣಲ್ಲಿ ನೀರುತಂದನು. ಸ್ವಭಾವ ಗಂಭೀರನಾದರೂ, ಉಂಗುರವನ್ನು ಕಂಡೊಡನೆಯೆ ಆತನ ಹೃದಯವು

ದ್ರವಿಸಿತು. ಚಳಿಗಾಲದಲ್ಲಿ ಗಡ್ಡೆಕಟ್ಟಿದ ಹಿಮವು ಬೇಸಗೆಯಲ್ಲಿ ಕರಗಿ ನೀರಾಗುವಂತೆ, ಅರಸನ ಹೃದಯವು ದ್ರವಿಸಿ, ಕಂಬನಿಯಾಗಿ ಸುರಿದು ಆತನ ಗಂಡಸ್ಥಳವು ಪ್ಲಾವಿತವಾಯಿತು. ಕಣ್ವಮಹರ್ಷಿಯ ಪುತ್ರಿಯು ಕೆಲವು ದಿನಗಳ ಹಿಂದೆ ತನ್ನ ಆಸ್ಥಾನಕ್ಕೆ ಬಂದು, ಆರ್ಯಪುತ್ರ ಎಂದು ಸಂಬೋಧಿಸಿದಾಗ ತಾನೇಕೆ ಅವಳನ್ನು ನಿರ್ದಯನಂತೆ, ಕಟುಕನ ಹಾಗೆ ತಿರಸ್ಕರಿಸಿದೆನೆಂದು ಆತನು ಮರುಕಗೊಂಡನು. ಸಾಕ್ಷಾತ್ ಪ್ರಿಯೆಯು ಸಮಕ್ಷದಲ್ಲಿ ನಿಂತು ನಾನಾ ವಿಧಗಳಿಂದ ಎಚ್ಚರಪಡಿಸಿದರೂ, ಮಲಗಿದ ದುಷ್ಟ ಹೃದಯವು ಇಂದು ಕೇವಲ ಉಂಗುರವನ್ನು ಕಂಡೊಡನೆಯೆ ಎದ್ದು ಅತಿಶಯವಾದ ದುಃಖಕ್ಕೇಕೆ ಈಡಾಯಿತೆಂದು ಆತನಿಗೆ ತಿಳಿಯಲಿಲ್ಲ. ತನ್ನಿಂದ ತಿರಸ್ಕೃತಳಾಗಿ ಮುನ್ನಡೆಯದಿರೆಂದು ಗುರುಶಿಷ್ಯನಿಂದ ಆಜ್ಞಾಪಿತಳಾಗಿ, ತನ್ನೆಡೆಗೆ ದೀನದೃಷ್ಟಿಯನ್ನು ತಿರಿಗಿಸಿದ ಶಕುಂತಳೆಯ ದೃಶ್ಯವು ದುಷ್ಷಂತ ಮಹಾರಾಜನ ಹೃದಯವನ್ನು ವಿಷದ ಬಾಣದಂತೆ ಚುಚ್ಚಿತು. ಹೃದಯದ ರುಧಿರವು ನೀರಾಗಿ ಕಣ್ಣುಗಳ ಮಾರ್ಗವಾಗಿ ಹರಿದು, ಕೈಯಲ್ಲಿದ್ದ ವಜ್ರದುಂಗುರವನ್ನು ತೊಯ್ದು ಬಿಟ್ಟಿತು; ಸುತ್ತಲಿದ್ದ ವಿಶ್ವವೆಲ್ಲವನ್ನೂ ಮುಳುಗಿಸಿಬಿಟ್ಟಿತು.

ಪ್ರಿಯೆಗೆ ತಾನಿತ್ತ ಉಂಗುರವನ್ನು ಸಕಾಲದಲ್ಲಿ ಒದಗಿಸಿ ಮಹದುಪಕಾರವನ್ನು ಮಾಡಿದ ಅಂಬಿಗನಿಗೆ ತಕ್ಕ ಪುರಸ್ಕಾರವನ್ನು ಮಾಡಲಿಕ್ಕೆ ಅರಸನು ರಾಜದೂತನಿಗೆ ಅಪ್ಪಣೆಯಿತ್ತನು. ಮಾಢವ್ಯನನ್ನು ಕರೆದು ಏಕೆ ತನಗೆ ಶಕುಂತಳೆಯ ನೆನಪುಂಟು ಮಾಡಲಿಲ್ಲವೆಂದು ಕೇಳಿದನು. 'ಎಲ್ಲವನ್ನೂ ಹೇಳಿ, ಕಡೆಗೆ ಇದು ಪರಿಹಾಸವೆಂದೆಯಲ್ಲವೆ? ನಾನೂ ಹಾಗೆಯೇ ತಿಳಿದುಕೊಂಡೆ,' ಎಂದು ಮಾಢವ್ಯನು ತನ್ನ ತಪ್ಪನ್ನು ಅರಸನ ತಲೆಯ ಮೇಲಿಟ್ಟನು. ಭವಿಷ್ಯವನ್ನು ಮೀರಲಳವಲ್ಲೆಂದು ಅರಸನನ್ನು ಮತ್ತೆ ಸಂತಯಿಸಿದನು.

ಶಕುಂತಳೆಯ ವ್ಯಾಪಾರವೆಲ್ಲವೂ ಸ್ವಪ್ನದಂತೆ ತೋರಿ, ಮಾಯೆಯಂತೆ ನಲಿದು, ಭ್ರಮೆಯಂತೆ ಕ್ಲೇಶಪಡಿಸಿ, ಅಲ್ಪ ಪುಣ್ಯಫಲವಾಗಿ ಪರಿಣಮಿಸಿ, ಇನ್ನೊಮ್ಮೆಗೆ ಅವಳು ಬಾರದಂತಾಯಿತಲ್ಲ ಎಂದು

ದುಷ್ಯಂತನು ದುಃಖಿಸಿದನು. ತಾನು ಇನ್ನೆಂದು ಪ್ರಿಯೆಯೊಡನೆ ಸಮಾಗಮ ಪಡೆಯುವಂತಾಗುವುದೆಂದು ಬಹಳವಾಗಿ ದುಃಖಿಸಿದನು. ಬಳಿಗೈದಿ ಬಂದ ಸಾಕ್ಷಾತ್ ಸಹಧರ್ಮಿಣಿಯನ್ನು ನಿರಾಕರಿಸಿ, ಈಗ ಅವಳ ಚಿತ್ರವನ್ನು ಮನಸ್ಸಿನ ಭಿತ್ತಿಯಲ್ಲಿ ಬರೆಯಬೇಕಾಯಿತಲ್ಲ? ಎಂದು ಅಂದುಕೊಂಡನು. ಮಾರ್ಗದಲ್ಲಿ ಬಂದ ಹೊಳೆಯನ್ನು ದಾಟಿ, ಬಿಸಿಲುಗುದುರೆಯ ನೀರನ್ನು ಬಯಸುವಂತಾಯಿತಲ್ಲ? ಎಂದು ಶೋಚಿಸಿದನು. ಆತನ ಮನಸ್ಸಿನಲ್ಲಿ ಆಲೋಚನೆಗಳು ಒಂದರನಂತರ ಒಂದು ಎದ್ದು ಬಂದುವು; ಸಾವಿರ ಮನೋರಥಗಳು ಉತ್ಪನ್ನವಾದುವು. ವರ್ಷಾಕಾಲದಲ್ಲಿ ಗಂಗಾನದಿಯ ನೀರು ಹರಿಯುವಾಗ ನೀರಿನ ರಭಸಕ್ಕೆ ತಟದ ಮಣ್ಣು ಮೇಲಿಂದ ಮೇಲೆ ಕೆಳಜಾರುವಂತೆ, ಅರಸನ ಮನಸ್ಸಿನಲ್ಲಿ ಮನೋರಥಗಳು ಹುಟ್ಟು ತ್ತಿದ್ದುವು. ಹುಟ್ಟಿದಂತೆ ವಿಲಯಗೊಳ್ಳುತ್ತಿದ್ದುವು.

ದುಷ್ಯಂತನು ತನ್ನ ಪ್ರಿಯೆಯ ಭಾವಚಿತ್ರವೊಂದನ್ನು ಬರೆದನು. ಮೃಗಯಾವಿಹಾರಿಯಾಗಿ ಕಣ್ವಾಶ್ರಮಕ್ಕೆ ತೆರಳಿದಾಗ ತಾನು ಶಕುಂತಳೆ ಯನ್ನು ಮೊದಲು ಯಾವ ಸ್ಥಿತಿಯಲ್ಲಿ ಕಂಡಿದ್ದನೊ, ಅದೇ ಸ್ಥಿತಿಯಲ್ಲಿ ಅವಳ ಭಾವಚಿತ್ರವನ್ನು ಬರೆದನು. ಶಕುಂತಳೆಯು ಹೆದರಿದವಳಂತೆ ತೋರುತ್ತಿದ್ದಳು. ಆಕೆಯು ಇಬ್ಬರು ಸಖಿಯರಿಂದ ಒಡಗೂಡಿದ್ದಳು. ಅವಳ ಮುಡಿಯು ಸಡಿಲಾದುದರಿಂದ ಕುಸುಮಗಳು ಜಾರುವಂತೆ ತೋರುತ್ತಿದ್ದುವು. ಅವಳ ಮುಖದಲ್ಲಿ ಬೆವರಿನ ಹನಿಗಳು ಹೊಮ್ಮು ತ್ತಿದ್ದುವು. ಮರಗಳಿಗೆ ನೀರುಣಿಸಿ ಆಯಾಸವಾದುದರಿಂದ ಬಾಹುಗಳನ್ನು ಜೋಲುಬಿಟ್ಟು ಮಾವಿನಮರದ ಪಕ್ಕದಲ್ಲಿ ಬಳಲಿ ನಿಂತುಕೊಂಡಿದ್ದಳು. ಇದಿರಿನಲ್ಲಿ ಜೇನನ್ನೀಂಟುವ ಆಶೆಯಿಂದ ದುರುದುಂಬಿಯೊಂದು ಆಕೆಯ ವದನಸರೋಜಕ್ಕೆ ಎರಗುತ್ತಿತ್ತು. ಕೆಂದಾವರೆಯಂತಿದ್ದ ತನ್ನ ಕೈಯಿಂದ ತನ್ನ ಮುಖವನ್ನು ಮುಚ್ಚಿಕೊಂಡು ಭೀತಳಾಗಿದ್ದಳು.

ಚಿತ್ರವನ್ನು ಅರಸನು ಇನ್ನೂ ಪೂರ್ಣವಾಡಿದ್ದಿಲ್ಲ. ಮಾಲಿನೀ ತೀರದ ಮಳಲಿನಲ್ಲಿ ಹಂಸಗಳು ಆಡುವುದನ್ನು ತೋರಿಸಿದ್ದಿಲ್ಲ. ಆ ನದಿಯ ಸಮೀಪಕ್ಕೆ ಕೃಷ್ಣಮೃಗಗಳು ಸುಳಿಯುವ ಗೌರೀಗುರು ಗಿರಿಯ

ಬುಡವನ್ನು ಬರೆದಿದ್ದಿಲ್ಲ. ಮುನಿಗಳು ಒದ್ದೆ ವಸ್ತ್ರವನ್ನು ಒಣಗಲು ಬಿಟ್ಟ ಮರಗಳ ಅಡಿಯಲ್ಲಿ ತನ್ನ ಶೃಂಗಾಗ್ರದಿಂದ ಸಹಚರಿಯ ವಾಮನಯನ ವನ್ನು ತುರಿಸುವ ಕೃಷ್ಣಮೃಗವನ್ನು ಕಾಣಿಸಿದ್ದಿಲ್ಲ. ಅಷ್ಟು ಮಾತ್ರವಲ್ಲ, ತಾನು ಮೊದಲು ಕಂಡಾಗ, ಶಕುಂತಳೆಯು ತನ್ನ ಕಿವಿಯಲ್ಲಿ ಶಿರೀಷ ಕುಸುಮವೊಂದನ್ನು ಮುಡಿದುಕೊಂಡಿದ್ದಳು. ಅದರ ಕೇಸರಗಳು ಆಕೆಯ ಗಂಡಸ್ಥಳದವರೆಗೂ ಬಂದಿದ್ದುವು. ಶಕುಂತಳೆಯು ದುಷ್ಟಭೃಂಗಕ್ಕೆ ಹೆದರಿ 'ರಕ್ಷಿಸಿರಿ' ಎನ್ನುವಾಗ ಯಾವುದಾವುದು ತನಗೆ ರಮಣೀಯ ವಾಗಿ ತೋರಿಬಂದುದೋ ಅದೆಲ್ಲವನ್ನೂ ಬರೆಯಬೇಕೆಂದಿದ್ದನು.

ಅರಸನು ಚಿತ್ರವನ್ನು ತಲ್ಲೀನನಾಗಿ ಬರೆಯುತ್ತಿದ್ದನು. ಸಮೀಪ ವಿದ್ದ ಮಾಢವ್ಯನೆಂದನು—'ಪೂಜ್ಯಳಾದವಳೀಕೆ ಕೈಯಿಂದ ಮುಖ ಮುಚ್ಚಿಕೊಂಡು ಹೆದರಿದವಳಂತೆ ತೋರುವಳೇಕೆ? ಈ ದುರುದುಂಬಿಯು ಆಕೆಯ ಮುಖಕ್ಕೆ ಎರಗುತ್ತಿರುವುದೆ?' ಅರಸನು ವಿಶ್ವವೆಲ್ಲವನ್ನೂ ಮರೆತು ಬಿಟ್ಟಿದ್ದನು. ಆತನ ಮನಸ್ಸು ಕಣ್ವಾಶ್ರಮದತ್ತ ಪಯಣ ಬೆಳೆಸಿ, ಶಕುಂತಳೆ ಯಿಲ್ಲದಿದ್ದರೂ ಅಲ್ಲಲ್ಲಿಯೆ ಸುಳಿಯುತ್ತಿದ್ದಿತು. ಉದ್ವಿಗ್ನನಾದ ಅರಸನು 'ಈ ದುಷ್ಟಭೃಂಗವನ್ನು ಅಟ್ಟು,' ಎಂದು ಮಾಢವ್ಯನಿಗೆ ಆಜ್ಞೆಯಿತ್ತನು.

'ದುಷ್ಟ ಶಿಕ್ಷಕನಾದ ನೀನೇ ಅಟ್ಟುವುದು ಉಚಿತವಲ್ಲವೆ?' ಎಂದನು ಮಾಢವ್ಯನು.

ಅರಸನು ರಕ್ಷಾಶಿಕ್ಷೆಯಲ್ಲಿ ದಕ್ಷನಾಗಿದ್ದನು. ತನ್ನ ಪ್ರಿಯೆಯ ಸಮೀಪಕ್ಕೆ ಬಂದ ದುಷ್ಟಭೃಂಗವನ್ನು ಸಾಮೋಪಾಯದಿಂದ ಹೊರಡಿಸ ಬೇಕೆಂದಾತನು ಹೀಗೆಂದನು—ಎಲೈ ಕುಸುಮಲತೆಗಳಿಗೆ ಪ್ರಿಯನಾದ ಅತಿಥಿಯೆ! ನಿನ್ನ ಸಹಚರಿಯು ಈ ಕುಸುಮದಲ್ಲಿರುವಳು; ಹಸಿದಿರು ವಳು. ನಿನ್ನೊಳು ಅನುರಾಗವಿರುವುದರಿಂದ ನಿನ್ನನ್ನು ಬಿಟ್ಟು ಜೇನನ್ನು ಕುಡಿಯಲಾರಳು. ಸಹಚರಿಯೆಡೆಗೆ ಪೋಗು. ಇಲ್ಲಿ ಬಿದ್ದು ದುಃಖ ವನ್ನು ಅನುಭವಿಸಬೇಡ.'

ದುಷ್ಟಭೃಂಗವು ಅರಸನ ಆಜ್ಞೆಗೆ ವಿಧೇಯವಾಗಿ ನಡೆಯಲಿಲ್ಲ. 'ಈ ಜಾತಿ ಹೋಗುವಂತಹುದಲ್ಲ. ಬಹು ಕೆಟ್ಟದ್ದು' ಎಂದ ಮಾಢವ್ಯನ

ಮಾತು ಕೇಳಿ ಅರಸನಿಗೆ ರೇಗಿತು. 'ಒಹೋ, ಎಲೆ ತುಂಬಿಯೆ! ನನ್ನಾಜ್ಞೆಯಂತೆ ನಡೆಯಲಾರೆ! ಹಾಗಾದರೆ ಕೇಳು-ಯಾರಿಂದಲೂ ಸ್ಪೃಷ್ಟವಾಗದೆ, ಬಾಲತರುಪಲ್ಲವದಂತೆ ಸುಂದರವಾದ ನನ್ನ ಪ್ರೇಯಸಿಯ ಬಿಂಬಾಧರವನ್ನು ಮುಟ್ಟುವಿಯಾದರೆ, ನಿನ್ನನ್ನು ಕಮಲೋದರವೆಂಬ ಬಂಧನವನ್ನು ಸೇರಿಸುವೆನು. ತಿಳಿದಿರಲಿ.'

'ಇಂತಹ ತೀಕ್ಷ್ಣ ದಂಡಕ್ಕೆ ಭಯಪಡದೆ ಇದ್ದೀತೇ,' ಎಂದು ಮಾಢವ್ಯನು ನಕ್ಕನು. ಅರಸನು ಉನ್ಮತ್ತನಾಗಿದ್ದನೆಂದು ಆತನು ತಿಳಿದಿದ್ದನು. 'ಇದು ಚಿತ್ರವಲ್ಲವೆ?' ಎಂದು ಅರಸನಿಗೆ ಮತ್ತೆ ಎಚ್ಚರ ಕೊಟ್ಟನು.

ಚಿತ್ರವಿದೆಂದು ನೆನಪುಂಟಾದೊಡನೆ, ಅರಸನು ಕಟ್ಟಿದ ಗಾಳಿಗೋಪುರವೆಲ್ಲ ನೆಲಕ್ಕೆ ಬಿಡಿಯಿತು. ಶಕುಂತಳೆ ಇರುವಳೆಂದು ನಂಬಿ, ಆಕೆಯ ದರ್ಶನಸುಖವನ್ನು ತನ್ಮಯನಾಗಿ ಅನುಭವಿಸುತ್ತಿರಲು, ಸ್ಮೃತಿ ಹುಟ್ಟಿಸಿ ತಿರುಗೊಮ್ಮೆ ಆತನ ಕಾಂತೆಯನ್ನು ಚಿತ್ರಗತವನ್ನಾಗಿ ಮಾಢವ್ಯನು ಮಾಡಬಹುದಿತ್ತೆ? ಅರಸನ ಕಣ್ಣಲ್ಲಿ ನೀರು ತುಂಬಿತು. ಅವನ ದುಃಖಕ್ಕೆ ವಿಶ್ರಾಂತಿಯಿರಲಿಲ್ಲ. ಕನಸಿನಲ್ಲಾದರೂ ಅವಳೊಡನೆ ಕೂಡುವೆನೆಂದರೆ, ಆತನಿಗೆ ನಿದ್ದೆಯು ಬರುತ್ತಿದ್ದಿಲ್ಲ; ಚಿತ್ರಾರ್ಪಿತಳನ್ನು ಕಾಣುವೆನೆಂದರೆ, ಕಣ್ಣಿಂದ ಇಳಿವ ಕಂಬನಿ ಬಿಡುತ್ತಿದ್ದಿಲ್ಲ.

ಆಕಾಶದಿಂದ ಹಠಾತ್ತಾಗಿ ಬಂದ ಪ್ರಭಾಮಂಡಲವುಳ್ಳ ಜ್ಯೋತಿಯು ಶಕುಂತಳೆಯನ್ನು ಎಲ್ಲಿಗೊಯ್ದಿದ್ದಿತೆಂದು ಯಾರಿಗೂ ತಿಳಿಯಲೊಲ್ಲದು. ಅರಸನು ವಿರಹದುಃಖದಿಂದ ಬೆಂದನು; ಅಯೋಗ್ಯವಾದುದನ್ನು ಗೈದೆನೆಂದು ಪಶ್ಚಾತ್ತಾಪಪಟ್ಟನು. ಮುನಿಶಿಷ್ಯರಿಗೆ ತಾನಾಡಿದ ಮಾತು ತಿರುತಿರುಗಿ ನೆನಪಿಗೆ ಬರುತ್ತಿದ್ದಿತು. ಮಗಳನ್ನು ದೂಷಿಸಬೇಡವೆಂದು ಬೇಡಿದ ಮುದುಕಿಯ ಮಾತುಗಳಿಗೆ ನಕ್ಕು ಅವಮಾನ ಪಡಿಸಿದುದರ ಸ್ಮರಣೆಯಾಗುತ್ತಿತ್ತು. ಸಾಕ್ಷಾತ್ ಪ್ರಿಯೆಗೆ ತಿರಸ್ಕಾರಮಾಡಿದ ಚಿತ್ರವು ಕಣ್ಮುಂದು ನಿಲ್ಲುತ್ತಿತ್ತು. ಹಿಮಾಲಯದ ತಪ್ಪಲಿನ ಕಣ್ವ ಮಹರ್ಷಿಯು ಮಗಳಾದ ಶಕುಂತಳೆಯೊಡನೆ ಬಂದು—'ಎಲೈ ರಾಜನೆ, ನಿನ್ನ ಮಡದಿ ಈಕೆ; ಸ್ವೀಕರಿಸಿ ಬಾಳು' ಎಂದು ಹೇಳುತ್ತಿದ್ದರೆ, ತಾನು ಯಾವ ರೀತಿ

ಯಲ್ಲಿ ವರ್ತಿಸಿ ಆತನ ಅಸಂತುಷ್ಟಿಗೆ ಕಾರಣನಾಗುತ್ತಿದ್ದನೊ? ಪ್ರಿಯಂವದಾನಸೂಯೆಯರೇ ಬಂದು, ಚಂದ್ರಸೂರ್ಯರಂತಿದ್ದ ಪ್ರಿಯಂವದಾನಸೂಯರೆ ಬಂದು—'ಗೆಳೆಯ, ಭೃಂಗದಂತೆ ಬಂದು, ಭೃಂಗದಂತೆ ಸುಳಿದು ಭೃಂಗದಂತೆ ಹಿಂತೆರಳಿದೆಯಾ?' ಎಂದೆನ್ನುವಾಗ ತಾನಾವ ರೀತಿ ಇರುತ್ತಿದ್ದನು? ಅಥವಾ ಚಂದ್ರಸೂರ್ಯರಿಲ್ಲದೆ ಭೂಮಿ ಕತ್ತಲಿಂದ ತುಂಬುವಂತೆ ಗೆಳತಿಯರು ಸಮೀಪವಿಲ್ಲದ ಶಕುಂತಳೆಯನ್ನು ಗುರುತಿಸಲಾರದಾದನೆ ಅರಸನು? ಒಂದು ಉಂಗುರದ ಪ್ರಭಾವದಿಂದ, ಕೇವಲವಾಗಿ ಅಚೇತನವಾದ ಉಂಗುರವೊಂದರ ಪ್ರಭಾವದಿಂದ ಮರವೆಯು ಸಿಡಿದು ಹೋಗುವುದಾದರೆ, ಪ್ರಿಯಂವದಾನಸೂಯೆಯರು ಅಲ್ಲಿಂದ ಹಸ್ತಿನಾವತಿಯ ವರೆಗೆ ನಡೆದು ಬಂದಿದ್ದರೆ ಎಲ್ಲವೂ ಸುಗಮವಾಗುತ್ತಿತ್ತಲ್ಲವೆ? ಛೆ, ಅದಾವ ಮಾತು? ಸಾಕ್ಷಾತ್ ಪ್ರಿಯೆಯು ಬಂದು ನಿಂತಾಗ ಗುರುತಾಗದಿದ್ದರೆ, ಪ್ರಿಯಂವದಾನಸೂಯೆಯರ ಕೂಡಿಕೆಯೇನಾಗುವಂತಿತ್ತು? ಉಂಗುರಕ್ಕೆ ಶಕುಂತಳೆಯ ಕೋಮಲವಾದ ಬೆರಳಲ್ಲಿ ಚಿರಕಾಲ ಉಳಿಯುವ ಪುಣ್ಯವಿದ್ದಿಲ್ಲ; ಅಂತೆಯೆ ತನಗೂ ಕೆಲಕಾಲ ದುಃಖದ ಸವಿಯನ್ನು ತಿಳಿಸುವಂತೆ ವಿಧಿ ಬರೆದಿದ್ದಿರಬೇಕು.

ದೀಪವಿದ್ದರೂ ಮರವೆಯ ಕಾರಣದಿಂದ ಅರಸನು ಅಂಧಕಾರವನ್ನು ಅನುಭವಿಸಿದನು. ದುರ್ವಾಸನ ಶಾಪವು ಮುಕ್ತವಾಗಿದ್ದರೂ, ಶಾಪಫಲದಿಂದ ಆತನು ವಿಮುಕ್ತನಾಗಿರಲಿಲ್ಲ. ತನ್ನ ನಾಡಿನಲ್ಲಿ ವಸಂತೋತ್ಸವನ್ನು ಮಾಡಬಾರದೆಂದು ದುಷ್ಯಂತ ಮಹಾರಾಜನು ಕಟ್ಟಪ್ಪಣೆಯಿತ್ತನು. ವಸಂತನೂ ಕೂಡ ಆತನ ಆಜ್ಞೆಗೆ ಬಾಹಿರನಲ್ಲ. ಚಳಿಗಾಲವು ಕಳೆದು ಹೋದರೂ ಪುಂಸ್ಕೋಕಿಲದ ಕಂಠವು ಹೊರಹೊಮ್ಮುತ್ತಿದ್ದಿಲ್ಲ. ಮುಗುಳು ಹುಟ್ಟಿ ಬಹುಕಾಲವಾದರೂ, ಅದರಲ್ಲಿ ಪರಾಗವಾಗಲಿ, ಜೇನಾಗಲಿ ಬೆರೆಯಲಿಲ್ಲ; ವಿಕಾಸವಾಗದೆ ಮುಕುಳಾವಸ್ಥೆಯಲ್ಲಿಯೆ ಉಳಿದಿತ್ತು.

---

# ೧೧. ಶಾಕುಂತಳ



ಸ್ವರ್ಗ ಲೋಕದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಘೋರ ಸಮರವುಂಟಾಯಿತು. ಕಾಲನೇಮಿ ಯೆಂಬ ರಾಕ್ಷಸಾಧಮನ ಮಕ್ಕಳು ಇಂದ್ರನಿಗೆ ವಿರೋಧ ನಿಂತಿದ್ದರು. ಸುರಾಸುರರ ಯುದ್ಧ ಗಳಲ್ಲಿ ಸುರರು ಯಾವಾಗಲೂ ದುಷ್ಯಂತನ ಸಹಾಯಸಂಪತ್ತಿಯಿಂದಲೆ ಜಯಶೀಲರಾಗುತ್ತಿದ್ದರು. ಇಂದ್ರನು ದುಷ್ಯಂತ ನಿಗೆ ಕರೆಕಳುಹಿಸಿದನು; ಬಂದು ತನಗೆ ಸಹಾಯವೀಯಬೇಕೆಂದನು. ಶಕುಂತಳಾವಿಯೋಗದಿಂದ ನಿರುತ್ಸಾಹಿಯಾದ ಅರಸನು ಗೆಳೆಯನ ಕರೆ ಯೆಂದು ಶರದ್ವಿತೀಯನಾಗಿ ಸ್ವರ್ಗಲೋಕಕ್ಕೆ ತೆರಳಿದನು. ದೇವಸೈನ್ಯ ದಲ್ಲಿ ಮುಖ್ಯವಾದ ಭಾಗವನ್ನು ವಹಿಸಿಕೊಂಡು, ರಾಕ್ಷಸರನ್ನೆಲ್ಲ ನಿರಾ ಯಾಸವಾಗಿ ಸೋಲಿಸಿ, ಅವರ ಹುಟ್ಟನ್ನಡಗಿಸಿದನು. ಸಂತುಷ್ಟನಾದ ಮಹೇಂದ್ರನು ತನ್ನ ಗೆಳೆಯನನ್ನು ನಾನಾ ವಿಧಗಳಿಂದ ಸನ್ಮಾನಿಸಿ, ಉಪ ಚರಿಸಿ, ಬೀಳ್ಕೊಟ್ಟನು.

ಮಾತಲಿಯೆ ಸಾರಥಿಯಾಗಿದ್ದ ಇಂದ್ರನ ರಥದಲ್ಲಿ ಕುಳಿತು ದುಷ್ಯಂತನು ಸ್ವದೇಶಕ್ಕೆ ಇಳಿಯುತ್ತಿದ್ದಾಗ ಸ್ವರ್ಗಲೋಕದ ದೇವತೆಗಳು ತನ್ನನ್ನು ಹೊಗಳುವುದನ್ನು ಕಂಡನು. ಅವರಲ್ಲಿ ಕೆಲವರು ತಮ್ಮನ್ನು ರಾಕ್ಷಸರಿಂದ ರಕ್ಷಿಸಿದ ಮಹಾರಾಜನ ಚರಿತ್ರೆಯನ್ನು ಗಾನಯೋಗ್ಯವಾಗು ವಂತೆ ರಚಿಸಿ, ತಮ್ಮ ಪ್ರೇಯಸಿಗಳನ್ನು ಸಿಂಗರಗೊಳಿಸಿ ಉಳಿದ ಅಂಗರಾಗದ ವಿವಿಧ ಬಣ್ಣಗಳಿಂದ ಕಲ್ಪಲತಾಂಶುಕಗಳಲ್ಲಿ ಅದನ್ನು ಬರೆ ಯುತ್ತಿದ್ದರು. ರಥವು ಮೇಘಗಳ ಮಾರ್ಗವಾಗಿ ಇಳಿಯುವಾಗ ಅರಸ ನಿಗೆ ಮನುಷ್ಯಲೋಕವು ಆಶ್ಚರ್ಯಕರವಾಗಿಯೂ ರಮಣೀಯವಾಗಿಯೂ ಕಂಡುಬಂದಿತು. ಮೊದಲು ಶೈಲಗಳ ಶಿಖರಗಳು ಕಾಣುತ್ತ ಬಂದು,

ಅನಂತರ ಅವುಗಳ ಶಿಖರಗಳಿಂದ ಭೂಮಿಯು ಕೆಳಗಿಳಿಯುವಂತೆ ತೋರಿತು. ತಮ್ಮ ತಮ್ಮ ಎಲೆಗಳ ರಾಶಿಯಲ್ಲಿ ಅಡಗಿದ ಮರಗಳು ಕ್ರಮೇಣ ಶಾಖಾಪ್ರದರ್ಶನವನ್ನು ಮಾಡಿ, ಕಣ್ಣಿಗೆ ಗೋಚರಿಸಿದುವು. ನೀರಿಲ್ಲದಂತೆ ತೋರುವ ನದಿಗಳು ವಿಸ್ತಾರವಾಗಿ ಹರಿಯುವುದು ಕಂಡು ಬಂದಿತು. ಅರಸನು ಕೆಳಕೆಳಗೆ ಇಳಿಯುವಾಗ ಭೂಮಿಯು ಮೇಲೆ ಮೇಲೆ ಎತ್ತಲ್ಪಟ್ಟಂತೆ ತೋರುತ್ತಿತ್ತು.

ರಥವು ಮುಂದಕ್ಕೆ ಇಳಿಯುತ್ತಿದ್ದಾಗ, ಅರಸನಿಗೆ ಒಂದು ಪರ್ವತವು ಕಂಡುಬಂದಿತು. ಆ ಪರ್ವತವು ಪೂರ್ವ ಪಶ್ಚಿಮ ಸಮುದ್ರಗಳ ವರೆಗೂ ವ್ಯಾಪಿಸಿ, ಸಂಧ್ಯಾಕಾಲದ ಮೇಘಮಂಡಲದಂತೆ ತೋರುತ್ತಿದ್ದಿತು. ಸ್ವಾಯಂಭುವನ ಮಗನಾಗಿ ಪ್ರಜಾಪತಿಯೆನಿಸಿಕೊಂಡು, ಸುರರಿಗೂ ಅಸುರರಿಗೂ ತಂದೆಯಾದಂತಹ ಕಶ್ಯಪಮುನಿಯು ಮಡದಿಯಾದ ಅದಿತಿಯೊಡನೆ ಕೂಡಿ ತಪಸ್ಸು ಮಾಡುತ್ತಿದ್ದ ಕ್ಷೇತ್ರವೇ ಅದಾಗಿತ್ತು. ಅದಕ್ಕೆ ಕಿಂಪುರುಷಪರ್ವತವೆನ್ನುತ್ತಿದ್ದರು. ಅಲ್ಲಿ ಸೂರ್ಯನಿಗೆ ಅಭಿಮುಖವಾಗಿ ನಿಂತು ಕಲ್ಲಿನಂತೆ ವರ್ಷಗಳ ಬಳಿಕ ವರ್ಷವೂ ಮೌನಿಯಾಗಿ ನಿಂತು ಅತಿಕಷ್ಟದಿಂದ ತಪಸ್ಸನ್ನು ಮಾಡುತ್ತಿದ್ದ ಋಷಿಗಳು ಹಲವರಿದ್ದರು. ಕೆಲವರ ಮೈಗೆಲ್ಲ ಗೆದ್ದಲು ಮುಸುಕಿತ್ತು. ಕೆಲವರ ಹೃದಯದ ಮೇಲೆ ಸರ್ಪಗಳು ತಮ್ಮ ಪದರು ಬಿಟ್ಟಿದ್ದುವು. ಕೆಲವರ ಕಂಠಗಳಲ್ಲಿ ಜೀರ್ಣವಾದ ಲತೆಗಳು ಸುತ್ತುಬಂದಿದ್ದುವು. ಇನ್ನು ಕೆಲವರ ಜಡೆಗಳಲ್ಲಿ ಹಕ್ಕಿಗಳು ಗೂಡುಗಳನ್ನು ಕಟ್ಟಿದುವು. ಇಂತಹ ಪವಿತ್ರವಾದ ಕ್ಷೇತ್ರವನ್ನು ಕಂಡು, ಶ್ರೇಯಸ್ಸನ್ನು ಅತಿಕ್ರಮಿಸಿ ನಡೆಯಬಾರದೆಂದು ಅರಸನು ತನ್ನ ರಥವನ್ನು ನಿಲ್ಲಿಸಿದನು. ಭಗವಂತನಾದ ಕಶ್ಯಪನನ್ನು ಕಂಡು, ಆತನಿಗೆ ಪ್ರದಕ್ಷಿಣೆ ಬಂದು ನಮಸ್ಕರಿಸಿ, ಆತನಿಂದ ಆಶೀರ್ವಾದವನ್ನು ಪಡೆಯಬೇಕೆಂದು ಅರಸನು ಇಚ್ಛೈಸಿದನು.

ಕಶ್ಯಪನು ತನ್ನ ಪತ್ನಿಯಾದ ಅದಿತಿದೇವಿಗೆ ಪತಿವ್ರತಾಧರ್ಮವನ್ನು ಅಧಿಕರಿಸಿ ಉಪದೇಶಮಾಡುತ್ತಿದ್ದನು. ಆದುದರಿಂದ ಅರಸನಿಗೆ ಆತನ ಸಮಯವನ್ನು ಕಾಯಬೇಕಾಯಿತು. ಮಾತಲಿಯು ತಾನು ಮುಂದು

ಹೋಗಿ, ದುಷ್ಯಂತನು ಬಂದ ವಾರ್ತೆಯನ್ನು ಕಶ್ಯಪನಿಗೆ ತಿಳಿಸುವೆನೆಂದು ಅತ್ತ ನಡೆದನು. ಮಹಾರಾಜನು ಅಲ್ಲಿಯೆ ಬೆಳೆದ ಅಶೋಕವೃಕ್ಷದ ಬುಡದಲ್ಲಿ ಕುಳಿತುಕೊಂಡು, ಆ ಪವಿತ್ರಕ್ಷೇತ್ರದ ಸೌಂದರ್ಯವನ್ನೂ ಗಾಂಭೀರ್ಯವನ್ನೂ ಅನುಭವಿಸಿದನು.

ಅಶೋಕವೃಕ್ಷದ ಬುಡದಲ್ಲಿ ಕುಳಿತ ದುಷ್ಯಂತನ ಬಲುಗಣ್ಣು ಹಾರಿತು. ಆತನ ಜೀವನದ ಮನೋರಥವು ಸರ್ವಥಾ ಕೈಗೂಡು ವಂತಿರಲಿಲ್ಲ. ಒಮ್ಮೆ ಬಳಿಸೇರಿದ ಕಲ್ಯಾಣಮೂರ್ತಿಯನ್ನು ತಿರಸ್ಕರಿ ಸಿದ್ದನು; ಅದರ ಫಲವಾಗಿ ನಿರಂತರವಾದ ದುಃಖವಲ್ಲದೆ ಸುಖವು ಪರಿ ಣಮಿಸೀತೇ? ಹಿಂದೆ ರಾಮನಿಂದ ವಿಯುಕ್ತಳಾದ ಸೀತಾದೇವಿಯು ಅಶೋಕವೃಕ್ಷದ ಆಶ್ರಯವನ್ನು ಹೊಂದಿ, ನಿಮಿಷಗಳನ್ನು ಯುಗಗಳಂತೆ ಕಳೆದಿದ್ದಳು. ಅಂತಹ ಅಶೋಕವೃಕ್ಷದ ಬುಡವನ್ನು ಸೇರಿದೊಡನೆ ರಾಜ ನಿಗೆ ಶಕುಂತಳಾವಿರಹದಿಂದುಂಟಾದ ದುಃಖವು ಮತ್ತೊಮ್ಮೆ ಕಾಣಿಸಿ ಕೊಂಡಿತು.

ಸಮೀಪದಲ್ಲೆ ಬಾಲಕನೊಬ್ಬನು ಆಡುತ್ತಿದ್ದನು. ಆತನು ಪುಷ್ಟಾಂಗ ನಾಗಿಯೂ ದೃಢಾಂಗನಾಗಿಯೂ ಇದ್ದು ಕಾಣಲು ಸುಂದರನಾಗಿದ್ದನು. ಆತನು ಸಿಂಹದ ಮರಿಯೊಂದನ್ನು ಎಳೆದಾಡುತ್ತ ಅದನ್ನು ನೋಯಿಸು ತ್ತಿದ್ದನು. ಋಷ್ಯಾಶ್ರಮದವರಿಗೆಲ್ಲ ಪ್ರಾಣಿಗಳು ಮಕ್ಕಳಂತಿರುವುವು. ಹುಲಿಯಾದರೇನು? ಹುಲ್ಲೆಯಾದರೇನು? ಅವೆಲ್ಲವೂ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟವಲ್ಲವೆ? ಆದರೆ, ಈತನೇನು ಇಂತಹ ಪುಣ್ಯಕರವಾದ ಸ್ಥಳ ದಲ್ಲಿ ಹಿಂಸೆ ಮಾಡಲಿಕ್ಕೆ ತೊಡಗಿದನೆಂದು ಅರಸನು ಬೇರೆ ತಿಳಿಯಲಿಲ್ಲ. ಹಿಂದೆ ಕಣ್ವಾಶ್ರಮದಲ್ಲಿ ವಿಹರಿಸುವಾಗ, ತನ್ನ ಪ್ರಿಯೆಯು ಹುಲ್ಲೆ ಮರಿಗಳಿಗೆ ಮುದ್ದಿಟ್ಟು ಪ್ರೀತಿಸುವುದನ್ನು ಕಂಡಿದ್ದನು. ಸೌಂದರ್ಯೋ ಪಾಸಕನಾಗಿ ಅದನ್ನು ಕಂಡು ಕಂಡು ದಣಿಯದಿದ್ದನು. ಇಂದು ಕಶ್ಯ ಪಾಶ್ರಮವನ್ನು ಹೊಕ್ಕು ಮಗುವೊಂದು ತನ್ನ ಪ್ರಾಯಕ್ಕೆ ಮೀರಿದ ಶಕ್ತಿ ಯಿಂದ ಸಿಂಹದ ಮರಿಯನ್ನು ನೋಯಿಸುವುದನ್ನು ಕಂಡು, ಬೆರಗಾಗ ದಿದ್ದರೂ ಬಹಳವಾಗಿ ಸಂತೋಷಪಟ್ಟನು. ಅಲ್ಲಿ ಶೃಂಗಾರದ ಸೌಂದರ್ಯ

ವನ್ನು ಅನುಭವಿಸಿದ್ದರೆ, ಇಲ್ಲಿ ಬೀರದ ಚೆಲುವನ್ನು ಪಾನಮಾಡಿದನು. ಆದರೆ, ಈ ಬಾಲಕನಾರು?

'ಸರ್ವದಮನ! ನಿನ್ನ ಛಲ ಹೆಚ್ಚಾಗುತ್ತಿದೆ. ಸಿಂಹದ ಮರಿಯನ್ನು ಬಿಡು, ಸರ್ವದಮನ!' ಎಂದು ತಾಪಸಿಯೊಬ್ಬಳು ಬಾಲಕನನ್ನು ಗದರಿಸಿದಳು. ಆತನು ಅತ್ತ ಗಮನಕೊಡದೆ, ತಾಯಿಯ ಮೊಲೆಹಾಲನ್ನು ಅರ್ಧಕುಡಿದ ಸಿಂಹದ ಮರಿಯನ್ನು ಎಳೆದೆಳೆದು, 'ಮರಿಯೆ! ಆಕಳಿಸು. ನಿನ್ನ ಹಲ್ಲುಗಳನ್ನು ಲೆಕ್ಕಮಾಡುವೆನು,' ಎಂದು ಅದರ ಬಾಯನ್ನು ಅಗಲ ಮಾಡಿ 'ಒಂದು, ಎಲಡು, ಮೂಲು, ನಾಲುಕು' ಎಂದು ಲೆಕ್ಕ ಹಾಕಿದನು. 'ಮರಿಯನ್ನು ಬಿಡದಿದ್ದರೆ, ಅದರ ತಾಯಿ ಖಂಡಿತವಾಗಿ ನಿನ್ನ ಮೇಲೆ ಬೀಳುವುದು,' ಎಂದು ತಾಪಸಿಯು ಮೂಗಿನ ಮೇಲೆ ಕೈಯಿಟ್ಟು ತಿರಿಗೊಮ್ಮೆ ಬೆದರಿಸಿದಳು. ಬಾಲಕನು ನಕ್ಕು 'ಓಹೋ, ನನಗೆ ಭಯವಾಗುತ್ತದೆ,' ಎಂದು ತನ್ನ ತುಟಿಯನ್ನು ತೋರಿಸಿ, ತಾನು ಹೆದರುವವನಲ್ಲವೆಂದು ಆಕೆಗೆ ತಿಳಿಸಿದನು.

ರಾಜನು ಬಾಲಕನ ರೂಪವನ್ನು ಕಂಡು ಮುಗ್ಧನಾದನು. ಅರ್ಧಸ್ತನವನ್ನು ಕುಡಿದ ಸಿಂಹದ ಮೇಲೆ ತನ್ನ ಪರಾಕ್ರಮವನ್ನು ತೋರಿಸುವ ಬರೀ ಮೂರು ವರ್ಷ ಪ್ರಾಯದ ಬಾಲಕನ ಧೈರ್ಯವನ್ನು ಕಂಡು, ಮಹತ್ತಾದ ಶಕ್ತಿಯು ಬೀಜವಾಗಿರುವ ಈ ಮಗು ಕಿಡಿಯ ರೂಪದಲ್ಲಿರುವ ಬೆಂಕಿಯೆಂದು ಮನಗಂಡನು. ಚಂದನವೃಕ್ಷದ ಬುಡದಲ್ಲಿ ಹುತ್ತ ಕಟ್ಟುವ ಸರ್ಪವು ಚಂದನವೃಕ್ಷವನ್ನೆ ಹಾಳುಮಾಡುವಂತೆ ಈ ಋಷಿಕುಮಾರನು ಆಶ್ರಮ ರೀತಿಗೆ ವಿರುದ್ಧವಾಗಿ ಆಚರಿಸಲು ಕಾರಣವೇನಿರಬಹುದೆಂದು ಆತನಿಗೆ ತಿಳಿಯಲಿಲ್ಲ. ಆದರೆ, ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲಿ ಅನುರಾಗವುಂಟಾಗುವಂತೆ, ಬಾಲಕನಲ್ಲಿ ಆತನಿಗೆ ಪ್ರೀತಿಯುಂಟಾಯಿತು. ಮಕ್ಕಳಿಲ್ಲದೆ ಊರವರ ಮಕ್ಕಳಲ್ಲಿ ಪ್ರೀತಿಯುಂಟಾಗುವಂತೆ ಈ ಬಾಲಕನಲ್ಲಿಯೂ ಹಾಗಾಗಿರಬಹುದೆಂದು ಊಹಿಸಿ ಸಪ್ಪೆಯಾದನು.

ತಾಪಸಿಯು ಬಾಲಕನೆಡೆಗೆ ಬಂದು, 'ವತ್ಸ ಸರ್ವದಮನ! ಹಾಗೆ ಮಾಡಬಾರದಪ್ಪ. ಸಿಂಹದ ಮರಿಯನ್ನು ಬಿಟ್ಟು ಬಿಡು. ನಿನಗೆ ಆಡುವುದಕ್ಕೆ ಇನ್ನೊಂದು ವಸ್ತುವನ್ನು ಕೊಡುವೆನು,' ಎಂದು ದಾನೋಪಾಯಕ್ಕೆ ಇಳಿದಳು. 'ಎಲ್ಲಿ, ಅದೇನು ಕೊಡುವಿ'ಯೆಂದು ಕೈಯೊಂದನ್ನು ಆತನು ನೀಡಿದನಲ್ಲದೆ, ಸಿಂಹದ ಮರಿಯನ್ನು ಮಾತ್ರ ಬಿಡಲಿಲ್ಲ. ಹುಡುಗನನ್ನು ಮಾತುಗಳಿಂದ ಸುಮ್ಮನಿರಿಸಲಾಗಲಿಲ್ಲ. ಅಲ್ಲಿಯೇ ಇನ್ನೊಬ್ಬಳು ತಾಪಸಿಯಿದ್ದಳು. ಆಕೆಗೆ ಆಶ್ರಮಕ್ಕೆ ಹೋಗಿ ಋಷಿಕುಮಾರನಾದ ಮಾರ್ಕಂಡೇಯನು ಬಣ್ಣದಿಂದ ಚಿತ್ರಿಸಿದ ಮಣ್ಣಿನ ನವಿಲನ್ನು ತಂದು ಕೊಡೆಂದು ಅವಳು ಹೇಳಿದಳು. ಬಾಲಕನಾದರೊ 'ಆ ವರೆಗೆ ಈ ಸಿಂಹದ ಮರಿಯೊಡನೆ ಆಡುವೆನು' ಎಂದು ನಗುತ್ತ ಬಿಡಿಸಲಿಕ್ಕೆ ಬಾರದ ಮಂಗ ಮುಷ್ಟಿಯಿಂದ ಸಿಂಹದ ಮರಿಯನ್ನು ಹಿಡಿದು, ಅದು ಕೋಪದಿಂದ ಗರ್ಜಿಸುತ್ತಿದ್ದರೂ ಹೆದರದೆ ಅದನ್ನು ಬಾಧಿಸಿದನು. ಬಾಲಕನ ದುರುಳತನವನ್ನು ಕಂಡು ಅರಸನಿಗೆ ಬಾಲಕನನ್ನು ಹಿಡಿದುಕೊಳ್ಳಬೇಕೆಂಬ ಆಶೆಯುಂಟಾಯಿತು. ನಿಷ್ಕಾರಣವಾದ ಹಾಸದಿಂದ ಮುಗುಳಿನ ಹಲ್ಲುಗಳನ್ನು ತೋರುವ, ತೊದಲ್ನುಡಿಗಳಿಂದ ಮನಸ್ಸನ್ನು ಸೆಳೆಯುವ ಮಕ್ಕಳನ್ನು ತೊಡೆಯ ಮೇಲೇರಿಸಿ ಅವುಗಳ ಪಾದಧೂಳಿಯಿಂದ ಮಲಿನರಾಗುವವರೇ ಧನ್ಯರೆಂದನು ಅರಸನು.

ಸರ್ವದಮನನು ಕಶ್ಯಪಾಶ್ರಮದಲ್ಲಿ ಮಾಡುವ ಕಾರ್ಯವನ್ನು ಕಂಡು ತಾಪಸಿಯು ಸಹಿಸಲಾರದಾದಳು. ತನ್ನ ಅಂಕೆಗೆ ಆತನು ಬರುವವನಲ್ಲ. ಸಮೀಪವಿರುವ ಋಷಿಕುಮಾರನೊಬ್ಬನನ್ನು ಕರೆದು, ಅವನಿಂದ ಸಹಾಯವನ್ನು ಪಡೆಯುವೆನೆಂದು ಅತ್ತಿತ್ತ ನೋಡುವಾಗ ಅಶೋಕ ವೃಕ್ಷದ ಅಡಿಯಲ್ಲಿ ಕೂತ ದುಷ್ಷಂತನನ್ನು ಕಂಡು, ಬಂದು ಸಿಂಹದ ಮರಿಯನ್ನು ಬಿಡಿಸೆಂದಳು.

ಬಾಲಕನನ್ನು ಕೈಯಾರೆ ಮುಟ್ಟುವಂತಹ ಭಾಗ್ಯವು ತನಗುಂಟಾಯಿತೆಂದು ಅರಸನು ಸಂತುಷ್ಟನಾದನು. 'ಋಷಿಪುತ್ರನೆ! ಮುನಿಯ ಕುಲದಲ್ಲಿ ಹುಟ್ಟಿ, ಆಶ್ರಮಧರ್ಮಕ್ಕೆ ವಿರುದ್ಧವಾಗಿ ನಡೆಯಬಾರದಪ್ಪ'!

ಎಂದು ಆತನು ಬಾಲಕನ ಎಡೆಗೆ ನಡೆದನು. 'ಭದ್ರಮುಖನೆ! ಇವನು ಋಷಿಕುಮಾರನಲ್ಲವಲ್ಲ!' ಎಂದು ತಾಪಸಿಯು ಅರಸನಿಗೆಂದಳು.

'ಈತನು ಋಷಿಕುಮಾರನಲ್ಲವಾದರೆ, ಯಾವ ಕುಲದಲ್ಲಿ ಹುಟ್ಟಿದವನಿವನು?'

'ಪುರುವಂಶದಲ್ಲಿ.'

ಈ ಮಾತನ್ನು ಕೇಳಿದೊಡನೆಯೆ ಅರಸನಿಗೆ ಆಶ್ಚರ್ಯವಾಯಿತು. 'ಈತನು ನಮ್ಮ ಕುಲದವನೆ? ಹಾಗಾದರೆ ಸರಿ, ಪುರುವಂಶದವರು ಅಂತ್ಯದಲ್ಲಿ ವನವಾಸವನ್ನು ಮಾಡುವವರು. ಯಾವನೊಬ್ಬ ಪುರುವಂಶದರಸನು ಇಲ್ಲಿ ಬಂದಿರಬೇಕು,' ಎಂದು ಆತನು ಊಹಿಸಿದನು. 'ಹಾಗಾದರೆ, ಮನುಷ್ಯರು ಈ ದೇವಭೂಮಿಯಲ್ಲಿ ಇರುವುದು ತಾನೆ ಹೇಗೆ?' ಎಂದು ಅರಸನು ಪುನಶ್ಚ ಪ್ರಶ್ನಿಸಿದನು.

'ಹಾಗಾದರೋ ಕೇಳು. ಈತನ ತಾಯಿ ಅಪ್ಸರಸ್ತ್ರೀಗೆ ಮಗಳಾದ ಕಾರಣ, ದೇವಗುರುವಾದ ಕಶ್ಯಪನ ಆಶ್ರಮದಲ್ಲಿ ಹೆತ್ತಳು.' ಅರಸನಿಗೆ ಮನಸ್ಸಿನಲ್ಲಿ ಏನೋ ಒಂದು ಕುತೂಹಲವು ಸಮನಿಸಿತು. 'ಆಕೆಯು ಯಾವ ರಾಜರ್ಷಿಯ ಧರ್ಮಪತ್ನಿಯು?' ಎಂದು ತನ್ನ ಉತ್ಸುಕತೆಯನ್ನು ಆತನು ಹೊರಗೆಡವಿದನು.

'ಧರ್ಮಪತ್ನಿಯು ತ್ಯಾಗ ಮಾಡಿದ ಆತನ ಹೆಸರನ್ನು ಎತ್ತುವುದಕ್ಕೆ ಯಾರಿಗೂ ಮನಸ್ಸಾಗಲಿಕ್ಕಿಲ್ಲವಲ್ಲ?' ಎಂಬ ಮುದುಕಿಯ ಮಾತು ಅರಸನ ಮನಸ್ಸಿಗೆ ನಾಟಿತು. ಕಥೆಯಿದೆಲ್ಲ ತನಗೆ ಅನ್ವಯಿಸುತ್ತಿದೆಯೆಂದು ಅರಸನಿಗೆ ಗೊತ್ತಾಯಿತು. ನಿಶ್ಚಿತವಾಗಿ ತಿಳಿಯಲೆಂದು ಶಿಶುವಿನ ತಾಯಿಯ ಹೆಸರನ್ನು ಕೇಳೋಣವೆಂಬ ಇಚ್ಛೆ ಆತನಿಗಾಯಿತು. ಆದರೆ, ಪರಪತ್ನಿಯರ ವಿಚಾರವನ್ನು ಮಾಡಬಾರದೆಂದು ಸುಮ್ಮನಾದನು.

ನವಿಲನ್ನು ತರಲು ಆಶ್ರಮಕ್ಕೆ ತೆರಳಿದ ತಾಪಸಿಯು ಹಿಂದಕ್ಕೆ ಬಂದಳು. 'ಸರ್ವದಮನನೆ! ಈ ಶಕುಂತಲಾವಣ್ಯವನ್ನು ಕಾಣು,' ಎಂದಾಕೆಯು ಬಾಲಕನನ್ನು ಕರೆದಳು. 'ಅಮ್ಮ ಬಂದಿರುವಳೆ? ಎಲ್ಲಿರು

ವಳು?' ಎಂದು ಆತನು ಕಣ್ಣೆತ್ತಿ ನೋಡಿದನು. 'ಇಲ್ಲ, ಮಗು. ನಿನ್ನ ತಾಯಿ ಬಂದಿಲ್ಲ. ಶಕುಂತದ ಲಾವಣ್ಯವನ್ನು ನೋಡೆಂದೆನು,' ಎಂದು ನವಿಲನ್ನು ಬಾಲಕನಿಗೆ ಕೊಟ್ಟಳು. ಆತನು ಸಂತೋಷದಿಂದ ಕೈ ನೀಡಿ ನವಿಲನ್ನು ತೆಗೆದುಕೊಂಡನು. ಆಗ ತಾಪಸಿಯು ಬಾಲಕನ ಕೈಯಲ್ಲಿ ರಕ್ಷಾ ಯಂತ್ರವನ್ನು ಕಾಣದೆ ದಿಗಿಲುಗೊಂಡಳು. ಆತನ ಕೈಗೆ ಕಶ್ಯಪನು ರಕ್ಷಾ ಯಂತ್ರವನ್ನು ಕಟ್ಟಿದ್ದನು. ಅದು ನೆಲಕ್ಕೆ ಬಿದ್ದರೆ ತಂದೆತಾಯ್ಗಳಲ್ಲದೆ ಮತ್ತಾರೂ ಅದನ್ನು ಮುಟ್ಟಲಾಗದು. ಒಂದು ಪಕ್ಷ ಮುಟ್ಟಿದರೆ, ಅದು ಸರ್ಪವಾಗಿ ಕಚ್ಚುವುದು. 'ಬಾಲಕನ ರಕ್ಷಾಯಂತ್ರವಿಲ್ಲವಲ್ಲ!' ಎಂದಾಕೆ ಸುತ್ತಲೂ ಕಣ್ಣನ್ನು ಹರಡಿಸಿದಳು.

ದುಷ್ಯಂತನು ಆಗ ತನ್ನ ಕಾಲಿನ ಬುಡದಲ್ಲಿದ್ದ ರಕ್ಷಾಯಂತ್ರವನ್ನು ಹೆಕ್ಕಿ ತೆಗೆದು, 'ಅಮ್ಮಾ, ಸಿಂಹದ ಮರಿಯನ್ನು ಮರ್ದಿಸುವಾಗ ಬಿದ್ದ ಯಂತ್ರವಿದು,' ಎಂದು ಅದನ್ನು ತಾಪಸಿಯ ಕೈಯಲ್ಲಿಟ್ಟನು. ತಾಪಸಿಗೆ ಬಹಳ ಆಶ್ಚರ್ಯವಾಯಿತು. 'ಪರಪುರುಷನೊಬ್ಬನು ಮುಟ್ಟಿದರೂ ಯಂತ್ರ ವೇಕೆ ಸರ್ಪವಾಗಲಿಲ್ಲ? ಈ ಮುಂಚೆ ಅನೇಕಾವೃತ್ತಿ ಹಾಗೆ ನಡೆದಿತ್ತು. ಇಂದೇಕೆ ಯಂತ್ರದ ಪ್ರಭಾವವು ಕುಗ್ಗಿಹೋಯಿತು?' ಎಂದು ಆಕೆ ತಿಳಿಯ ದಾದಳು. ನಡೆದ ವೃತ್ತಾಂತವನ್ನು ಬಾಲಕನ ತಾಯಿಯೊಡನೆ ನಿವೇದಿಸಲು ಆಶ್ರಮದತ್ತ ಹೊರಟಳು.

ದುಷ್ಯಂತ ಮಹಾರಾಜನು ಬಾಲಕನನ್ನೆತ್ತಿ ಮುದ್ದಿಸಿದನು. ತಾಪ ಸಿಯರಿಬ್ಬರೂ ಆಶ್ರಮಕ್ಕೆ ಹೊರಟ ಕಾರಣ, ತಾನೂ ತಾಯಿಯೆಡೆಗೆ ಹೋಗಲು ಬಾಲಕನು ಇಚ್ಛಿಸಿದನು. ತನ್ನನ್ನು ತೊಡೆಯ ಮೇಲಿರಿಸಿ ಕೊಂಡ ದುಷ್ಯಂತನೊಡನೆ—'ನನ್ನನ್ನು ಬಿಡು. ನಾನು ತಾಯಿಯ ಬಳಿಗೆ ಹೋಗುವೆನು,' ಎಂದು ಕೆಳಗಿಳಿಯಲು ಆತನು ಯತ್ನಿಸಿದನು. 'ಮಗನೆ, ನಿಲ್ಲು. ನಿನ್ನ ತಾಯನ್ನು ನನ್ನೊಡನೆಯೆ ಕಾಣುವೆ,' ಎಂದು ದುಷ್ಯಂತನು ಸರ್ವದಮನನಿಗೆಂದನು. 'ನನ್ನ ತಂದೆಯು ನೀನಲ್ಲ! ದುಷ್ಯಂತನು,' ಎಂದು ಸರ್ವದಮನನು ಧೈರ್ಯದಿಂದ ಪರುಷವಾಗಿಯೆ ಮಾತಾಡಿದನು.

ಅಷ್ಟರಲ್ಲಿ,—ಕನಸೋ ನನಸೋ—ರಾಜನಿಗೆ ಸರಿ ತಿಳಿಯದಂತಾ ಯಿತು. ಮಲಿನಾಂಬರದಿಂದ, ಕೊರಗಿದ ಮೊಗದಿಂದ, ಒಂದೆ ಜಡೆಯಿಂದ

ಶಕುಂತಳೆಯು ಕಾಣಬಂದಳು. ಶುದ್ಧಶೀಲಳಾಗಿ ಇಷ್ಟು ಸಮಯವೂ ವಿರಹವ್ರತವನ್ನು ಕೈಗೊಂಡು ಬಂದವಳು ಸರ್ವದಮನನ ರಕ್ಷಾಯಂತ್ರವು, ಅದನ್ನು ಮುಟ್ಟಿದವನನ್ನು ಸರ್ಪವಾಗಿ ಕಚ್ಚಲಿಲ್ಲವೆಂಬುದನ್ನು ನೋಡ ಬಂದಿದ್ದಳು. ಬಂದ ಆಗಂತುಕನನ್ನು ಕಂಡು ಆಕೆಗೆ ಆಶ್ಚರ್ಯವಾಯಿತು. ದುಷ್ಯಂತ ಮಹಾರಾಜನನ್ನು ಶಕುಂತಳೆಯು ಗುರುತಿಸಲಾರದೆ ಹೋದಳು. ಪಶ್ಚಾತ್ತಾಪದಿಂದ ಕಳೆಗುಂದಿದ ಮಹಾರಾಜನು ಎದ್ದು ನಿಂತು, 'ಅಹಾ! ಇದೋ ಪೂಜ್ಯಳಾದ ಶಕುಂತಳೆ!' ಎಂದು ಮೆಲ್ಲಗೆ ಉಸುರಿದನು. ಒಂದು ಹಜ್ಜೆ ಮುಂದಿಟ್ಟನು. ಸರ್ವದಮನನು ತಾಯಿಯೆಡೆಗೆ ಹಾರಿ, 'ಅಮ್ಮಾ! ಇವನಾವನು? ನನ್ನನ್ನು ಪುತ್ರನೆಂದು ಕರೆಯುತ್ತಾನೆ?' ಎಂದು ವಿಚಾರಿಸಿದನು.

'ಪ್ರಿಯೆ, ವಿಯೋಗದುಃಖದಿಂದ ಬಡವಾದ ನನ್ನನ್ನು ಗುರುತಿಸಲಾರದಾದೆ. ಕ್ಷಮಿಸು,' ಎಂದು ದುಷ್ಯಂತನು ದೀನನಾಗಿ ನುಡಿದನು.

ಶಕುಂತಳೆ ತನ್ನ ಕಣ್ಣನ್ನು ಅರಳಿಸಿದಳು! ಸರ್ವದಮನನು ರೆಪ್ಪೆ ಹಾಕದೆ ನಿಂತುಕೊಂಡನು.

'ಪ್ರಿಯೆ, ಚಂದ್ರನು ರಾಹುವಿನಿಂದ ಬಿಡುಗಡೆ ಹೊಂದಿ ರೋಹಿಣಿಯೊಡನೆ ಸೇರುವಂತೆ, ಮೋಹದಿಂದ ಮುಕ್ತನಾಗಿ ನಿನ್ನೊಡನೆ ನಾನು ಸೇರಿರುವೆನು,' ಎಂದು ದುಷ್ಯಂತನು ಕಣ್ಣೀರಿಟ್ಟನು.

'ಆರ್ಯಪುತ್ರನೆ, ಜಯಶೀಲನಾಗು,' ಎಂದು ತನ್ನ ಪ್ರಿಯನಿಗೆ ಜಯಶಬ್ದವನ್ನು ಹಾಡುವಾಗ ಶಕುಂತಳೆಯ ಕಂಠವು ಗದ್ಗದವಾಯಿತು; ಕಣ್ಣು ಕಂಬನಿಯಿಂದ ಪೂರ್ಣವಾಯಿತು. ಮನಸ್ಸು ಶೂನ್ಯತೆಯಿಂದ ಅಳಿದು ಹೋಯಿತು.

'ಶಕುಂತಳೆ! ನೀನೆಂದ ಜಯಶಬ್ದವು ಗದ್ಗದದಿಂದ ಹೊರಬಾರದಿದ್ದರೂ ನಾನು ಜಯಶೀಲನಾದೆನು. ಏಕೆಂದರೆ, ಸ್ವಾಭಾವಿಕವಾಗಿ ಪಾಟಲ ವರ್ಣವಿರುವ ನಿನ್ನ ತುಟಿಗಳನ್ನು ಕಾಣುವಂತಾಯಿತು,' ಎಂದು ರಾಜನು ಶಕುಂತಳೆಯ ಸಮೀಪಕ್ಕೆ ಬಂದನು.

ಆಳುವ ತಾಯ್ಯನ್ನು ಕಂಡು 'ಅಮ್ಮಾ! ಈತನಾರೆ'ಂದು ಸರ್ವ ದಮನನು ಕೇಳಿದನು. 'ಮಗನೆ, ನಿನ್ನ ಅದೃಷ್ಟವನ್ನು ಕೇಳು,' ಎಂದು ಶಕುಂತಳೆಯು ತನ್ನ ಮಗನನ್ನು ತಬ್ಬಿ ಹಿಡಿದುಕೊಳ್ಳಲು, ಪಶ್ಚಾತ್ತಾಪದಿಂದ ದಗ್ಧನಾದ ಮಹಾರಾಜನು ಶಕುಂತಳೆಯ ಕಾಲ್ಗೆರಗಿದನು:—'ಮಂಗಳಾಂಗಿಯೆ, ನಾನು ಮಾಡಿದ ಸರ್ವಾಪರಾಧವನ್ನು ಕ್ಷಮಿಸು. ಕುರುಡನು ತನ್ನ ತಲೆಯ ಮೇಲಿರುವ ಹೂಮಾಲೆಯನ್ನು ಸರ್ಪವೆಂದು ಭ್ರಮಿಸಿ, ತೊರೆಯುವನು. ಪ್ರಿಯೆ! ಅಂದು, ನಾನು ನಿನ್ನನ್ನು ನಿರಾಕರಿಸಿ ತೊರೆದ ಸಮಸ್ತವನ್ನೂ ಮರೆತು ಬಿಡು; ಯಾವುದೋ ಕಾರಣದಿಂದ ಮನಸ್ಸಿಗೆ ಆಗ ಅರಿವಿಲ್ಲದೆ ಹೋಯ್ತೆ'ಂದು ಕಣ್ಣೀರ ಧಾರೆಯಿಂದ ಆಕೆಯ ಪಾದಗಳನ್ನು ತೊಳೆದನು. ಶಕುಂತಳೆಯು ಅಶ್ರುಪೂರ್ಣ ನಯನಳಾಗಿ ಗಂಡನನ್ನು ಹಿಡಿದೆಬ್ಬಿಸಿ, 'ಆರ್ಯಪುತ್ರನೆ, ಏಳು! ನನ್ನ ಪ್ರಾಚೀನ ಕರ್ಮವು ಆಗ ಪರಿಣಮಿಸಿತು. ಆದುದರಿಂದ ಸ್ವಭಾವ ಕೃಪಾಳುಗಳಾದ ನೀವು ನನ್ನಲ್ಲಿ ವಿರಸರಾದಿರಿ'ಯೆಂದಳು.

ಹೀಗಾಗಲು ಕಾರಣವೇನೆಂದೂ ದುಃಖಭಾಗಿನಿಯಾದ ತನ್ನನ್ನು ಮತ್ತೆ ಹೇಗೆ ಸ್ಮರಿಸುವಂತಾಯಿತೆಂದೂ ಶಕುಂತಳೆ ಗಂಡನೊಡನೆ ವಿಚಾರಿಸಿದಳು. 'ಅದೆಲ್ಲವನ್ನು ಮತ್ತೆ ಹೇಳುವೆನು. ನಿನ್ನೀ ರೆಪ್ಪೆಗಳ ಮಧ್ಯದಲ್ಲಿ ತೋರುವಂತಹ ಬಾಷ್ಪವನ್ನು ಮುಂಚೆ ಒರಸದಾದೆನು. ಈಗಲಾದರೂ ಅದನ್ನು ಒರಸಿ, ದುಃಖವನ್ನು ಪರಿಹರಿಸುವೆನೆ'ಂದು ಆಕೆಯ ಬಾಷ್ಪಬಿಂದುಗಳನ್ನು ಒರಸುವಾಗ, ಶಕುಂತಳೆಗೆ ದುಷ್ಯಂತನ ಬೆರಳಲ್ಲಿದ್ದ ಉಂಗುರವು ತೋರಿತು. ಅದೇ ಉಂಗುರವಿದು! ಯಾವ ಉಂಗುರವನ್ನು ತನ್ನ ಬೆರಳಲ್ಲಿಟ್ಟು ಮೂರು ದಿವಸಗಳೊಳಗೆ ಬರುವೆನೆಂದು ನಂಬಿಸಿದ್ದನೋ ಅದೇ ಉಂಗುರವಾಗಿದ್ದಿತಿದು!! 'ಆರ್ಯಪುತ್ರ! ಆ ಉಂಗುರವಲ್ಲವೆ ಇದು?' ಎಂದು ಶಕುಂತಳೆ ಪಿಸುಗುಟ್ಟಿದಳು.

'ಹೌದು. ಈ ಉಂಗುರದಿಂದಲೆ ನೆನಪುಂಟಾಯಿತೆ'ಂದು ದುಷ್ಯಂತನು ಒಪ್ಪಿದನು.

'ಆರ್ಯನಿಗೆ ನಂಬಿಕೆಯನ್ನುಂಟುಮಾಡುವ ಕಾಲದಲ್ಲಿ ದೊರೆಯದೆ ಅನಿಷ್ಟ ಮಾಡಿತು,' ಎಂದು ಶಕುಂತಳೆ ನುಡಿದಳು.

'ಚಿಂತೆಯಿಲ್ಲ. ತಿರಿಗೊಮ್ಮೆ ಬಳ್ಳಿಯಲ್ಲಿ ಹೂವಾಗುವಂತೆ ನಿನ್ನ ಬೆರಳಲ್ಲಿ ಉಂಗುರವಿದಿರಲಿ,' ಎಂದು ದುಷ್ಯಂತನು ಉಂಗುರವನ್ನು ಬೆರಳಿಂದ ತೆಗೆದನು. 'ಬೇಡ. ನನಗಿದರಲ್ಲಿ ವಿಶ್ವಾಸವಿಲ್ಲ. ನೀವೇ ಧರಿಸಿಕೊಳ್ಳಿ,' ಎಂದು ಶಕುಂತಳೆಯು ಅದನ್ನು ಸ್ವೀಕರಿಸಲಿಲ್ಲ.

ಕಶ್ಯಪನು ದುಷ್ಯಂತ ಮಹಾರಾಜನಿಗೆ ಕರೆಕಳುಹಿಸಿದನು. ಶಕುಂತಳಾ ಸರ್ವದಮನರೊಡನೆ ಆತನು ಕಶ್ಯಪನ ದರ್ಶನಾಪೇಕ್ಷಿಯಾಗಿ ನಡೆದನು. ಈ ತ್ರಿತಯವು ಶ್ರದ್ಧೆ, ವಿತ್ತ ಮತ್ತು ವಿಧಿಯ ಸಮಾಗಮವೆಂಬಂತೆ ತೋರುತ್ತಿದ್ದಿತು.

ದುಷ್ಯಂತನು ಮುಂದುವರಿದು ಕಶ್ಯಪನಿಗೆ ನಮಸ್ಕರಿಸಿದನು. ವ್ಯಾಸಾದಿ ಮುನಿಗಳು ಯಾವಾತನನ್ನು ದ್ವಾದಶಮಾಸಗಳಲ್ಲಿ ದ್ವಾದಶಮೂರ್ತಿಗಳನ್ನು ತಳೆಯುವ ಸೂರ್ಯನ ತಂದೆಯೆನ್ನುವರೊ, ಯಾವಾತನು ಯಜ್ಞೇಶ್ವರನಾಗಿಯೂ ಮೂಲೋಕದ ಗಂಡನಾಗಿಯೂ ಇರುವ ಇಂದ್ರನ ಜನಕನಾಗಿರುವನೊ, ಯಾವಾತನು ಸ್ವಯಂಭುವನಿಗೂ ಶ್ರೇಷ್ಠನಾದ ವಿಷ್ಣುವಿಗೆ ವಾಮನಾವತಾರದಲ್ಲಿ ತಾತನಾದನೊ, ಅಂತಹ ಕಶ್ಯಪನಿಗೂ ಆತನ ಸಹಧರ್ಮಿಣಿ ಅದಿತಿದೇವಿಗೂ ಅಭ್ಯುದಯಕಾಲದಲ್ಲಿ ಪ್ರದಕ್ಷಿಣೆ ಬರುವಂತಾಯಿತೆಂದು ಬಹಳವಾಗಿ ಆತನು ಸಂತೋಷಪಟ್ಟನು. 'ವತ್ಸ, ಚಿರಂಜೀವಿಯಾಗು. ಪೃಥಿವಿಯನ್ನು ಪಾಲಿಸು,' ಎಂದು ಕಶ್ಯಪನು ಆಶೀರ್ವದಿಸಿದನು. ಶಕುಂತಳೆಯು ಅದಿತಿಗೂ ಕಶ್ಯಪನಿಗೂ ವಂದಿಸಲು, 'ನಿನ್ನ ಪತಿ ಸುರಪತಿಗೆ ಸಮಾನನು; ನಿನ್ನ ಪುತ್ರನು ಜಯಂತನಿಗೆ ಸದೃಶನು. ನಿನಗೆ ಬೇರೆ ಆಶೀರ್ವಾದವು ಉಚಿತವಲ್ಲ—ಇಂದ್ರಾಣಿಗೆ ಸಾಟಿಯಾಗಿ ಬಾಳು,' ಎಂದು ಕಶ್ಯಪನು ಪ್ರೀತಿಯಿಂದ ನುಡಿದನು.

ದುಷ್ಯಂತನು ಮುಂದೆ ಬಂದು, 'ಪೂಜ್ಯನಾದ ಗುರುವೆ, ನಿಮ್ಮ ಆಜ್ಞಾಧಾರಿಣಿಯನ್ನು ಗಾಂಧರ್ವದಿಂದ ಮದುವೆಯಾದೆನು. ಕೆಲಕಾಲದ ನಂತರ ಬಂಧುಗಳು ಇವಳನ್ನು ನನ್ನಡೆಗೆ ಒಯ್ಯಲು, ಸ್ಮೃತಿಶೈಥಿಲ್ಯದಿಂದ ಈಕೆಯನ್ನು ತಿರಸ್ಕರಿಸಿ, ತಮ್ಮ ಗೋತ್ರದ ಕಣ್ವ ಮಹರ್ಷಿಯಲ್ಲಿ ಅಪರಾಧ ಮಾಡಿರುವೆನು. ಅನಂತರ ಉಂಗುರವೊಂದರ ದರ್ಶನದಿಂದ ಈಕೆಯೊಡನೆ

ನಾನು ಮಾಡಿಕೊಂಡ ವಿವಾಹವು ನೆನಪಿಗೆ ಬಂದಿತು. ನಡೆಯುವಂತಹ ಆನೆಯನ್ನು ಕಂಡಾಗ ಆನೆಯೋ, ಅಲ್ಲವೋ ಎಂಬ ಸಂಶಯವುಂಟಾಗಿ ಅನಂತರ ಅದರ ಚರಣಗಳ ಚಿಹ್ನೆಗಳನ್ನು ಕಂಡು ಆನೆಯಿದು ಎಂದು ತಿಳಿಯುವಂತಾಯಿತು. ಇದೀಗ ಬಹಳ ವಿಚಿತ್ರವಾದುದು,' ಎಂದು ಬಿನ್ನವಿಸಿಕೊಂಡನು.

'ವತ್ಸ! ಇದು ನಿನ್ನ ತಪ್ಪಲ್ಲ. ನಿನಗೆ ಮರವೆಯುಂಟಾಗುವುದಕ್ಕೆ ಕಾರಣವಿದೆ. ಮೇನಕೆಯು ದುಃಖಿತಳಾದ ಇವಳನ್ನು ಇಲ್ಲಿಗೆ ಒಯ್ದು ಅದಿತಿಯ ಸಮೀಪಕ್ಕೆ ಬಂದೊಡನೆಯೆ, ದುರ್ವಾಸನ ಶಾಪದಿಂದಾಗಿ ಈ ತಪಸ್ವಿನಿಯು ನಿರಾಕೃತಳಾದಳೆಂದೂ ಆ ಶಾಪವು ಅಂಗುಲೀಯಕ ದರ್ಶನಾವಸಾನವಾಗಿತ್ತೆಂದೂ ಧ್ಯಾನಬಲದಿಂದ ತಿಳಿದುಕೊಂಡಿದ್ದೆನು,' ಎಂದು ಕಶ್ಯಪನು ಹೇಳಿದೊಡನೆಯೆ, ದುಷ್ಯಂತನು ಒಂದು ನಿಟ್ಟುಸಿರಿಟ್ಟು, 'ನಾನು ಅಪವಾದದಿಂದ ಮುಕ್ತನಾದೆ,' ಎಂದಂದುಕೊಂಡನು. ಶಕುಂತಳೆಗೂ ಇದರಿಂದ ತನ್ನ ಗಂಡನ ವಿಷಯದಲ್ಲಿ ಪಶ್ಚಾತ್ತಾಪವುಂಟಾಯಿತು. ಕಶ್ಯಪನು, 'ಮಗಳೆ, ನಿನ್ನ ಪತಿಯಲ್ಲಿ ಕೋಪಗೊಳ್ಳಬೇಡ. ಶಾಪದಿಂದಾಗಿ ದುಷ್ಯಂತನಿಗೆ ಮರವೆಯುಂಟಾಯಿತು. ಈಗ ಆ ಶಾಪವು ಕಳೆದು ನಿನ್ನ ಗಂಡನು ಶುದ್ಧಮನಸ್ಕನಾಗಿರುವನು. ನಿನ್ನ ಛಾಯೆಯು ಆಗ ಕನ್ನಡಿಯಲ್ಲಿ ಹಿಡಿಯಲಾರದೆ ಹೋಯಿತು. ಏಕೆಂದರೆ, ಅದಕ್ಕೆ ಕಿಲುಬು ಹಿಡಿದಿತ್ತು. ಈಗಲಾದರೊ ನಿನ್ನ ಗಂಡನಲ್ಲಿ ನಿನ್ನ ಪ್ರಭುತ್ವವು ಸುಲಭಾವಕಾಶವಾಗಿದೆ,' ಎಂದು ಮಗಳಿಗೆ ಬುದ್ಧಿವಾದವನ್ನು ಹೇಳಿದನು.

ಕಶ್ಯಪನು ಸರ್ವದಮನನ್ನೂ ಆಶೀರ್ವದಿಸಿದನು—'ನಿಶ್ಚಲ ಗತಿಯ ರಥದಿಂದ ಸಪ್ತಸಾಗರಗಳನ್ನು ದಾಟಿ, ಸಪ್ತದ್ವೀಪಗಳನ್ನು ಜಯಿಸಿ, ಎಲೆ ದುಷ್ಯಂತನೆ, ನಿನ್ನ ಸತ್ಪುತ್ರನು ಸಮಸ್ತ ಪ್ರಾಣಿಗಳನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳುವನು, ಮತ್ತು ಯಥಾರ್ಥನಾಮನಾಗಿ ಬಾಳುವನು. ಮುಂದಕ್ಕೆ ಲೋಕವೆಲ್ಲವೂ ಈತನನ್ನು ಸದ್ರಕ್ಷಕನಾದ ಕಾರಣ ಭರತನೆಂತಲೂ ಹೊಗಳುವದು.' ದುಷ್ಯಂತನು ತಲೆ ಬಾಗಿದನು; ಶಕುಂತಳೆಯು ಕೈ ಬೊಗಸೆ ಮಾಡಿದಳು. ಸರ್ವದಮನನೂ ತಂದೆತಾಯ್ಗಳಂತೆ ಮುನಿಯುನ್ನು ವಂದಿಸಿದನು.

ಕಶ್ಯಪಾಶ್ರಮದಲ್ಲಿ ಶಕುಂತಳಾದುಷ್ಯಂತರ ಮಿಲನವಾಯಿತೆಂಬ ವಾರ್ತೆ ಕಣ್ವಾಶ್ರಮಕ್ಕೆ ಹರಡಿತು. ತನ್ನ ಪ್ರೀತಿಯ ಸಾಕುಮಗಳು ಪುತ್ರ ವತಿಯಾಗಿ ಪತಿಯಿಂದ ಸ್ವೀಕೃತಳಾದಳೆಂದು ಕಣ್ವನು ಸಂತೋಷದಿಂದ ನಲಿದಾಡಿದನು; ಆಶ್ರಮದ ತನ್ನ ಒಡನಾಡಿಗಳೆಲ್ಲರಿಗೂ ಈ ವರ್ತಮಾನ ವನ್ನು ತಿಳಿಸಿದನು. ಕಣ್ವಾಶ್ರಮವು ಸಂತೋಷದ ಒರತೆಯಾಗಿ ಹರಿದ ವಿಪುಲವಾದ ಪೃಥಿವಿಯ ಮೇಲೆ ವಿಸ್ತರಿಸಿತು. ಕಣ್ವಾಶ್ರಮದ ಹೆಸರು ತೇಜಃಪುಂಜವಾಗಿ ನೆಗೆದು ಬಿತ್ತರದ ಬಾನಿನಲ್ಲಿ ವ್ಯಾಪಿಸಿತು.

ಈ ಕಥೆಯನ್ನು ಕುಸುಮವಾಗಿ ಅರಳಿಸಿದ ಕಾಳಿದಾಸನ ಕೌಶಲ್ಯ ಜಗತ್ತಿನ ಆತ್ಮವನ್ನು ಮೋಹಿಸಿ, ಸಂತೋಷ ಕೊಟ್ಟು ವರ್ಧಿಸಿ ಅಜರಾ ಮರವಾಯಿತು. ಜರ್ಮನಿಯ ಪ್ರಸಿದ್ಧ ಮಹಾಕವಿ ಗೋಥೆ ಎನ್ನು ವಂತೆ ಅಭಿಜ್ಞಾನ ಶಾಕುಂತಳವೆಂಬ ಬಳ್ಳಿಯಲ್ಲಿರುವ ವರ್ಷಾದಿಯ ಅಲರೂ ವರ್ಷಾಂತ್ಯದ ಫಲವೂ ತಂತಮ್ಮ ಸುವಾಸನೆಯನ್ನೂ ಮಾಧು ರ್ಯವನ್ನೂ ಏಕಕಾಲಕ್ಕೆ ಕೊಡುತ್ತಿರುವುವು. ಆತನೆನ್ನುವಂತೆ, ಸ್ವರ್ಗ ಮರ್ತ್ಯವೆರಡೂ ಶಕುಂತಳೆಯಲ್ಲಿ ಹೊಂದಿಕೆಯಾಗಿರುವುವು. ಅಂತಹ ನಾಟಕವನ್ನು ರಚಿಸಿದ ಮಹಾತ್ಮನು ತನ್ನ ಭರತವಾಕ್ಯದಲ್ಲಿ ವಿದ್ವಾಂಸ ರಿಗೆ ಸರಸ್ವತೀ ದೇವಿಯು ಮಂಗಳವನ್ನುಂಟುಮಾಡಲೆಂದು ಪ್ರಾರ್ಥಿಸಿರು ವನು. ಅರಸನು ತನ್ನ ಪ್ರಜೆಗಳನ್ನು ಧರ್ಮದಿಂದ ರಕ್ಷಿಸಲೆಂದು ಬಿನ್ನ ವಿಸಿರುವನು. ತನಗೆ ಪರಮಾತ್ಮನು ಪುನರ್ಜನ್ಮವನ್ನು ಕೊಡದೆ ಮೋಕ್ಷ ದಾಯಕನಾಗಲೆಂದು ಬೇಡಿಕೊಂಡಿರುವನು.

**ಕಾಳಿದಾಸನಂತಹ ಕವಿಯು ಇನ್ನೊಬ್ಬನಿಲ್ಲ;**
**ಶಾಕುಂತಳದಂತಹ ಕಥೆಯು ಇನ್ನೊಂದಿಲ್ಲ.**

